KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮೇ ೨೧, ೨೦೦೯ (ವೈಶಾಖ ೩೧, ಶಕ ವರ್ಷ ೧೯೩೧) | ಸಂಚಿಕೆ ೨೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಶಿಕ್ಷಣ ಸಚಿವಾಲಯ**

**ವಿಷಯ :** ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ದಿನಾಂಕ 1–9–2006ರ ಆದೇಶ ಸಂಖ್ಯೆ: ಇಡಿ 57 ಎಲ್‌ಐಬಿ 2006.
2. ಸರ್ಕಾರದ ದಿನಾಂಕ 7–2–2005ರ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004.
3. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಏಕಕಡತ ಸಂಖ್ಯೆ: ಲೋ.ಶಿ.ಗ್ರಂ.ಸ.ಉ/41/2008–09.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 1–9–2006ರ ಸರ್ಕಾರಿ ಆದೇಶದನ್ವಯ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದಂತೆ ಪುಸ್ತಕಗಳನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ಆ ಆದೇಶದನ್ವಯ, ಸದರಿ ಸಮಿತಿಯ ಕಾಲಾವಧಿಯು, ಅದನ್ನು ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಸಮಿತಿ ಅಸ್ತಿತ್ವಕ್ಕೆ ಬರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇತ್ತು. ಮೇಲೆ (2)ರಲ್ಲಿ ಓದಲಾದ, ದಿನಾಂಕ 7–2–2005ರ ಸರ್ಕಾರದ ಆದೇಶದನ್ವಯ, ಇತರೆ ಅಂಶಗಳ ಜೊತೆಗೆ, ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯು ಪಾಲಿಸಬೇಕಾದ ಕಾರ್ಯವಿಧಾನ, ಅದರ ಸ್ವರೂಪ ಮತ್ತು ಕಾರ್ಯ ವ್ಯಾಪ್ತಿಯನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ಏಕಕಡತದನ್ವಯ, ಸದರಿ ಸಮಿತಿಯನ್ನು ಪುನರ್ ರಚಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 308 ಎಲ್‌ಐಬಿ 2008, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2009.**

2. ಮೇಲೆ (2)ರಲ್ಲಿ ಓದಲಾದ ದಿನಾಂಕ 7–2–2005ರ ಸರ್ಕಾರಿ ಆದೇಶದ ಅನುಬಂಧ–2 ರನ್ವಯ ನಿಗದಿಪಡಿಸಿದ, ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದ ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯ ಸ್ವರೂಪದ ಪ್ರಕಾರ ಅದನ್ನು ಈ ಕೆಳಕಂಡಂತೆ ಪುನರ್ ರಚಿಸಲು ಸರ್ಕಾರದ ಈ ಮೂಲಕ ಆದೇಶಿಸಿದೆ.

1. ಡಾ॥ ಗುರುಲಿಂಗ ಕಾಪಸೆ, — ಅಧ್ಯಕ್ಷರು
   ದುರ್ಗಾದೇವಿ ಕಾಲೋನಿ, ಸಪ್ಪಾಪುರ, ಧಾರವಾಡ

| | | |
|---|---|---|
| 2. | ಪ್ರೊ॥ ಕೆ.ಇ. ರಾಧಾಕೃಷ್ಣ,<br>ನಂ. 06, ಆರ್‌ಇಹೆಚ್‌ಎಸ್, ಜೆ.ಸಿ. ನಗರ, ಮಹಾಲಕ್ಷ್ಮಿಪುರ, ಬೆಂಗಳೂರು–86 | ಸದಸ್ಯರು |
| 3. | ಶ್ರೀ ಜಾಣಗೆರೆ ವೆಂಕಟರಾಮಯ್ಯ (ಜಾವೆಂ),<br>ನಂ.3, 2ನೇ ಮುಖ್ಯರಸ್ತೆ, ಪಶ್ಚಿಮ ಕಾರ್ಡ್ ರಸ್ತೆ, ಶಿವನಗರ, ರಾಜಾಜಿನಗರ, ಬೆಂಗಳೂರು–10 | ಸದಸ್ಯರು |
| 4. | ಶ್ರೀ ಮಾನಸ,<br>ನಿಕಟಪೂರ್ವ ಅಧ್ಯಕ್ಷರು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, "ಕಾವ್ಯಲೋಕ" 1267, ಹೆಚ್.ಐ.ಜಿ., 1ನೇ ಅಡ್ಡ ರಸ್ತೆ, 2ನೇ ಹಂತ, ಶ್ರೀರಾಂಪುರ ಬಡಾವಣೆ, ಮೈಸೂರು–23. | ಸದಸ್ಯರು |
| 5. | ಪ್ರೊ॥ ಚಂದ್ರಶೇಖರ ವಸ್ತ್ರದ,<br>"ಬೆಳಗು" ಆನಂದಾಶ್ರಮ ರಸ್ಥೆ, ಮಸಾರಿ, ಗದಗ–582101 | ಸದಸ್ಯರು |
| 6. | ಡಾ॥ ಹೆಚ್. ಚಂದ್ರಶೇಖರ,<br>ಸಾಹಿತಿಗಳು, ಸಂಶೋಧಕರು, ಎಂಐಜಿ–77, ಕೆಹೆಚ್‌ಬಿ ಕಾಲೋನಿ, ಬಸವೇಶ್ವರನಗರ, 2ನೇ ಹಚಿತ, 6ನೇ ಮುಖ್ಯ ರಸ್ಥೆ, ಬೆಂಗಳೂರು | ಸದಸ್ಯರು |
| 7. | ಶ್ರೀಮತಿ ವೇದ,<br>ಕನ್ನಡ ಪ್ರಾಧ್ಯಾಪಕರು, ಮಹಾರಾಣಿ ಕಾಲೇಜು, ಮೈಸೂರು | ಮಹಿಳಾ ಸದಸ್ಯರು |
| 8. | ಡಾ॥ ಸರೋಜಿನ ಚವಲಾರ,<br>ನಂ. ಸಿ–10, ಅಪರ್ಣ ಅಪಾರ್ಟ್‌ಮೆಂಟ್ಸ್, ದೇಶಪಾಂಡೆ ನಗರ, ಹುಬ್ಬಳ್ಳಿ–580029 | ಸದಸ್ಯರು |
| 9. | ಡಾ॥ ಕೆ. ಚಿದಾನಂದಗೌಡ,<br>ನಂ. 3004, ಉದಯರವಿ, ಕುವೆಂಪು ಹೌಸ್, 5ನೇ ಮುಖ್ಯರಸ್ತೆ, 12ನೇ ಅಡ್ಡರಸ್ಥೆ, ವಿ.ವಿ.ಪುರಂ, ಮೈಸೂರು–570002 | ಸದಸ್ಯರು |
| 10. | ಡಾ॥ ಹೆಚ್.ಎಂ. ರಾಜಶೇಖರ್,<br>ನಂ. 630/ಹೆಚ್, ಅನಿಕೇತನ ರಸ್ತೆ, 6ನೇ ಅಡ್ಡರಸ್ತೆ (ಉತ್ತರ), ಕುವೆಂಪುನಗರ, ಮೈಸೂರು–23 | ಸದಸ್ಯರು |
| 11. | ಶ್ರೀ ಹರಿಕೃಷ್ಣಪುನರೂರು,<br>"ಶುಭವಾಗಲಿ" ಪುನರೂರು, ಮುಲ್ಕಿ ವಯಾ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಸದಸ್ಯರು |
| 12. | ಡಾ॥ ಟಿ.ವೈ. ಮಲ್ಲಯ್ಯ,<br>ಉಪ ಗ್ರಂಥಪಾಲಕರು, ಗ್ರಂಥಾಲಯ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ, ಮಂಗಳೂರು | ಸದಸ್ಯರು |
| 13. | ಅಧ್ಯಕ್ಷರು,<br>ಕನ್ನಡ ಪುಸ್ತಕ ಪ್ರಾಧಿಕಾರ ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಪ್ರಾಧಿಕಾರದ ಒಬ್ಬ ಸದಸ್ಯರು | ಸದಸ್ಯರು |
| 14. | ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ,<br>ಸರಸ್ವತಿ ಗೋದಾಮು, ಗುಲ್ಬರ್ಗಾ–585101 | ಸದಸ್ಯರು |
| 15. | ಅಧ್ಯಕ್ಷರು,<br>ಕನ್ನಡ ಸಾಹಿತ್ಯ ಪರಿಷತ್, ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಒಬ್ಬ ಸದಸ್ಯರು | ಸದಸ್ಯರು |
| 16. | ನಿರ್ದೇಶಕರು,<br>ಪ್ರಸಾರಂಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ | ಸದಸ್ಯರು |

| | | |
|---|---|---|
| 17. | ಅಧ್ಯಕ್ಷರು,<br>ಕನ್ನಡ ವಿಜ್ಞಾನ ಪರಿಷತ್, ಬೆಂಗಳೂರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಒಬ್ಬ ಸದಸ್ಯರು | ಸದಸ್ಯರು |
| 18. | ಡಾ॥ ವಿ.ಜಿ. ತಳವಾರ್,<br>ಗ್ರಂಥಾಲಯ ವಿಜ್ಞಾನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ಹಾಗೂ ಸದಸ್ಯರು ರಾಜ್ಯ ಗ್ರಂಥಾಲಯ ಪ್ರಾಧಿಕಾರ | ಸದಸ್ಯರು |
| 19. | ಅಧ್ಯಕ್ಷರು,<br>ಬೆಂಗಳೂರು ಪುಸ್ತಕ ಮಾರಾಟಗಾರರ ಹಾಗೂ ಪ್ರಕಾಶಕರ ಸಂಘ, 147, ಪೊಲೀಸ್ ಆಯುಕ್ತರ ಕಛೇರಿ ಎದುರು, ಇನ್‌ಫಾಂಟ್ರಿರಸ್ತೆ, ಬೆಂಗಳೂರು | ಸದಸ್ಯರು |
| 20. | ನಿರ್ದೇಶಕರು,<br>ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

3. ಕನ್ನಡ ಮತ್ತು ಆಂಗ್ಲ ಭಾಷೆ ಪುಸ್ತಕಗಳನ್ನು ಹೊರತುಪಡಿಸಿ ಇತರೆ ಭಾರತೀಯ ಭಾಷೆಯ ಪುಸ್ತಕಗಳನ್ನು ಆಯ್ಕೆ ಮಾಡಲು ಆಯಾಯಾ ಭಾಷೆಯ ಭಾಷಾ/ವಿಷಯ ಪರಿಣಿತರನ್ನು ಕೋ–ಆಪ್ಟ್ ಮಾಡಿಕೊಳ್ಳಬಹುದು.

4. ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಸಮಿತಿ ಅಸ್ತಿತ್ವಕ್ಕೆ ಬರುವವರೆಗೆ ಇವೆರಡರಲ್ಲಿ ಯಾವುದು ನಂತರವೋ ಅಲ್ಲಿಯವರೆಗೆ ಈ ಸಮಿತಿಯು ಅಸ್ತಿತ್ವದಲ್ಲಿರುತ್ತದೆ.

5. ಈ ಸಮಿತಿಯ ಕಾರ್ಯವ್ಯಾಪ್ತಿ ಮೇಲೆ (2)ರಲ್ಲಿ ಓದಲಾದ ದಿನಾಂಕ 7–2–2005ರ ಸರ್ಕಾರಿ ಆದೇಶದ ಅನುಬಂಧ–2ರನ್ವಯ ನಿಗದಿಪಡಿಸಿರುವಂತೆ ಇರುತ್ತದೆ. ಸದರಿ ಆದೇಶದ ಅನುಬಂಧ 1ರ ಪ್ರಕಾರ, ನಿಗದಿಪಡಿಸಿದ ಪುಸ್ತಕ ಆಯ್ಕೆಯ ಕಾರ್ಯವಿಧಾನವನ್ನು ಈ ಸಮಿತಿಯು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.566

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಪರಿಸರ ಸಂರಕ್ಷಣಾ ಶುಲ್ಕ ಪಾವತಿ ಬಗ್ಗೆ.

**ಪ್ರಸ್ತಾವನೆ :**

ಗಣಿಗಾರಿಕೆ/ಕಲ್ಲು ಗಣಿಗಾರಿಕೆ ಎಲ್ಲಿಯೇ ನಡೆದರೂ ಪರಿಸರಕ್ಕೆ ಆಘಾತ ಆಗಿಯೇ ಆಗುತ್ತದೆ. ಈ ಚಟುವಟಿಕೆಗಳು ನೈಸರ್ಗಿಕ ಸಂಪನ್ಮೂಲಗಳ ಕ್ಷೀಣತೆ ಮತ್ತು ವಾಯು, ಜಲ ಹಾಗೂ ಮಣ್ಣಿನ ಮಾಲಿನ್ಯಗಳ ರೂಪದಲ್ಲಿಯೂ ಪರಿಸರದ ಮೇಲೆ ಹಾನಿಯುಂಟುಮಾಡುವುದು ತಿಳಿದ ವಿಷಯವೇ ಆಗಿರುತ್ತದೆ.

ಗಣಿಗಾರಿಕೆ ಮತ್ತು ಕಲ್ಲು ಗಣಿಗಾರಿಕೆಗಳಿಂದ ಉಂಟಾಗುವ ಪರಿಸರ ಹಾನಿಯನ್ನು ಗಮನದಲ್ಲಿರಿಸಿಕೊಂಡು, ಅರಣ್ಯ ಭೂಮಿಯನ್ನು ಅರಣ್ಯೇತರ ಚಟುವಟಿಕೆಗಳಿಂದ ಗಣಿ/ಕಲ್ಲು ಗಣಿಗಾರಿಕೆಗೆ ಅನುಮತಿಸುವಾಗ ಭಾರತ ಸರ್ಕಾರ ಅಷ್ಟೇ ಪ್ರದೇಶದ ಅರಣ್ಯೇತರ ಭೂಮಿಯಲ್ಲಿ ಪರಿಹಾರಾತ್ಮಕ ಅರಣ್ಯವನ್ನು ಬೆಳೆಸಿ ನಂತರ ಅದನ್ನು ಮೀಸಲು/ರಕ್ಷಿತ ಅರಣ್ಯ ಪ್ರದೇಶವೆಂದು ಘೋಷಿಸಬೇಕೆಂಬುದನ್ನು ಕಡ್ಡಾಯಗೊಳಿಸಿದೆ. ಹೀಗೆ ಅರಣ್ಯ ಬೆಳೆಸುವುದಕ್ಕೆ ತಗಲುವ ವೆಚ್ಚವನ್ನು ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆ/ ಕಲ್ಲು ಗಣಿಗಾರಿಕೆ ನಡೆಸುವವರೇ ಭರಿಸಬೇಕಾಗಿರುತ್ತದೆ. ಸಾರ್ವಜನಿಕ ವಲಯದ ಯೋಜನೆಗಳಿಗೆ ಅರಣ್ಯ ಪ್ರದೇಶವನ್ನು ಪರಿವರ್ತಿಸುವಾಗ ಪರಿಹಾರಾತ್ಮಕ ಅರಣ್ಯೀಕರಣಕ್ಕೆ ಅಗತ್ಯವಾದ ಅರಣ್ಯೇತರ ಭೂಮಿ ಲಭ್ಯವಾಗದಿದ್ದಲ್ಲಿ ಅರಣ್ಯ (ಸಂರಕ್ಷಣಾ) ಕಾಯಿದೆ, 1980ರ ಮಾರ್ಗಸೂಚಿ ಕಂಡಿಕೆ 3.2 (VI)ರ ರೀತ್ಯಾ ಪರಿವರ್ತನೆಗೊಳ್ಳುವ ಅರಣ್ಯ ಪ್ರದೇಶದ ದುಪ್ಪಟ್ಟು ಕ್ಷೀಣಿತ ಅರಣ್ಯ ಪ್ರದೇಶದಲ್ಲಿ ಪರಿಹಾರಾತ್ಮಕ ಅರಣ್ಯ ಬೆಳೆಸುವುದಕ್ಕೂ ಅವಕಾಶ ಕಲ್ಪಿಸಲಾಗಿದೆ. ಪರಿಹಾರಾತ್ಮಕ ಅರಣ್ಯೀಕರಣದ ಒಟ್ಟಾರೆ ಉದ್ದೇಶ ಪ್ರಮುಖವಾಗಿ ಪರಿಸರದ ಮೇಲೆ ಉಂಟಾಗುವ ಹಾನಿಯನ್ನು ತಡೆಗಟ್ಟುವ/ಕಡಿಮೆಗೊಳಿಸುವುದೇ ಆಗಿರುತ್ತದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ 202/1995ಕ್ಕೆ ಸಂಬಂಧಿಸಿದ ಎಲ್.ಎ. ಸಂಖ್ಯೆ 566ರ ಐ.ಎ. ಸಂಖ್ಯೆ 826 ಮತ್ತು 859ರ ಮೇಲೆ ದಿನಾಂಕ 1–8–2003ರಂದು 'ಪರಿಹಾರಾತ್ಮಕ ಅರಣ್ಯೀಕರಣದ' ಮೇಲೆ ಹೊರಡಿಸಿದ ಆದೇಶದಲ್ಲಿ ಅರಣ್ಯ ಪ್ರದೇಶವನ್ನು ಅರಣ್ಯೇತರ ಚಟುವಟಿಕೆಗಳಿಗೆ ಬಳಸುವವರಿಂದ 'ನಿವ್ವಳ ವಾಸ್ತವ ಮೌಲ್ಯ (NPV)'ವನ್ನು ವಸೂಲು ಮಾಡುವಂತೆ ತಿಳಿಸಿದೆ. ಈ ಆದೇಶಾನುಸಾರ ರಾಜ್ಯ ಸರ್ಕಾರವು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ ಹೊರಡಿಸಿರುವ ಆದೇಶದ ಸಂಖ್ಯೆ: FEE 273 FGL 2002 ದಿನಾಂಕ 17–1–2004ರಲ್ಲಿ ರಾಜ್ಯದ

ತಾಲ್ಲೂಕುಗಳನ್ನು ಅರಣ್ಯದಲ್ಲಿನ ಸಸ್ಯ ಸಂಪತ್ತಿನ ಆಧಾರದ ಮೇಲೆ ವರ್ಗೀಕರಿಸಿ ಪ್ರತಿ ಹೆಕ್ಟೇರ್‌ಗೆ ರೂ. 5.80 ಲಕ್ಷದಿಂದ ರೂ. 9.20 ಲಕ್ಷಗಳವರೆಗೆ 'ನಿವ್ವಳ ವಾಸ್ತವ ಮೌಲ್ಯ (NPV)' ವನ್ನು ನಿಗದಿಗೊಳಿಸಲಾಗಿದೆ.

ಪರಿಹಾರಾತ್ಮಕ ಅರಣ್ಯೀಕರಣ ವೆಚ್ಚ ಮತ್ತು 'ನಿವ್ವಳ ವಾಸ್ತವ ಮೌಲ್ಯ (NPV)' ಗಳನ್ನು ವಿಧಿಸುವುದರ ಪ್ರಮುಖ ಉದ್ದೇಶವು ಅರಣ್ಯ ಪ್ರದೇಶವನ್ನು ಅರಣ್ಯೇತರ ಚಟುವಟಿಕೆಗೆ ಬಳಸುವುದರಿಂದ ಪರಿಸರದ ಮೇಲಾಗುವ ದುಷ್ಪರಿಣಾಮಗಳನ್ನು ಕಡಿಮೆಗೊಳಿಸುವುದು ಮತ್ತು ತಡೆಯುವುದೇ ಆಗಿರುತ್ತದೆ. ಆದರೆ ಅರಣ್ಯೇತರ ಕಂದಾಯ/ಕೃಷಿ/ಪಟ್ಟಾ ಭೂಮಿಯಲ್ಲಿ ಗಣಿಗಾರಿಕೆ/ ಕಲ್ಲು ಗಣಿಗಾರಿಕೆ ನಡೆಸುವಾಗಲೂ ಪರಿಸರದ ಮೇಲಾಗುವ ದುಷ್ಪರಿಣಾಮ ಇದೇ ಪ್ರಮಾಣದಲ್ಲಿದ್ದರೂ ಈ ಚಟುವಟಿಕೆಗಳ ಮೇಲೆ ಪರಿಹಾರಾತ್ಮಕ ಅರಣ್ಯೀಕರಣ ಮೌಲ್ಯ ಅಥವಾ 'ನಿವ್ವಳ ವಾಸ್ತವ ಮೌಲ್ಯ (NPV)' ಗಳಂತಹ ಶುಲ್ಕಗಳನ್ನು ವಿಧಿಸುತ್ತಿರುವುದಿಲ್ಲ. ಈ ವಿಷಯವನ್ನು ದಿನಾಂಕ 17–7–2008 ರಂದು ಜರುಗಿದ ರಾಜ್ಯ ಪರಿಸರ ವಿಮೋಚನಾ ಸಮಿತಿಯ ಸಭೆಯಲ್ಲಿ ಚರ್ಚಿಸಿ ಪರಿಸರಕ್ಕೆ ಹಾನಿಯುಂಟು ಮಾಡುವಂತಹ ಗಣಿಗಾರಿಕೆ/ ಕಲ್ಲು ಗಣಿಗಾರಿಕೆಗಳ ಬಗ್ಗೆ ಒಂದು ತಾತ್ವಿಕ ನಿರ್ಧಾರ ತೆಗೆದುಕೊಳ್ಳಲು ತೀರ್ಮಾನಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಮೇಲೆ ವಿವರಿಸಲಾದ ಅಂಶಗಳು ಮತ್ತು ತಾತ್ವಿಕ ನೆಲೆಗಟ್ಟಿನ ಆಧಾರದ ಮೇಲೆ ಹಾಗೂ "ಮಾಲಿನ್ಯ ಮಾಡುವವರೆ ಪಾವತಿಸಲಿ(Polluter to pay)" ನೀತಿಗೆ ಅನುಗುಣವಾಗಿ ಅರಣ್ಯೇತರ ಕಂದಾಯ ಮತ್ತು ಪಟ್ಟಾ/ಕೃಷಿ ಭೂಮಿಯ ಗಣಿಗಾರಿಕೆ/ಕಲ್ಲು ಗಣಿಗಾರಿಕೆ ನಡೆಸುವವರ ಮೇಲೆ ಪರಿಸರದ ಮೇಲಾಗುವ ದುಷ್ಪರಿಣಾಮವನ್ನು ಸರಿದೂಗಿಸಲು/ ತಡೆಗಟ್ಟಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ 'ಪರಿಸರ ಸಂರಕ್ಷಣಾ ತೆರಿಗೆ' ವಿಧಿಸಲು ಸರ್ಕಾರವು ತಾತ್ವಿಕವಾಗಿ ನಿರ್ಧರಿಸಿದೆ.

ಈ ಹಿನ್ನೆಲೆಯಲ್ಲಿ ಸರ್ಕಾರದ ಆದೇಶದ ಸಂಖ್ಯೆ: ಎಫ್‌ಇಇ 102 ಎಫ್‌ಎಪಿ 2008, ದಿನಾಂಕ 15–10–2008 ರಂತೆ ಪರಿಷ್ಕರಿಸಲ್ಪಟ್ಟಿರುವ 'ಪರಿಹಾರಾತ್ಮಕ ಅರಣ್ಯೀಕರಣ" ವೆಚ್ಚದ ದರದಲ್ಲಿ ಪ್ರತಿ ಹೆಕ್ಟೇರ್‌ಗೆ ರೂ. 84,000 ರಂತೆ 'ಪರಿಸರ ಸಂರಕ್ಷಣಾ ತೆರಿಗೆ' ವಿಧಿಸಲು ನಿರ್ಧರಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 25 ಇಎನ್‌ಜಿ 2008, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009.**

**(ಯೂನಿಕ್ ಸಂಖ್ಯೆ 35)**

ಮೇಲೆ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರೇತರ ಕಂದಾಯ/ಪಟ್ಟಾ/ಕೃಷಿ ಭೂಮಿಯಲ್ಲಿ ಗಣಿಗಾರಿಕೆ/ ಕಲ್ಲು ಗಣಿಗಾರಿಕೆ ನಡೆಸುವುದಕ್ಕೆ ಈ ಮೂಲಕ ಸರ್ಕಾರವು ಪ್ರತಿ ಹೆಕ್ಟೇರ್‌ಗೆ ರೂ. 84,000 ದರದಲ್ಲಿ 'ಪರಿಸರ ಸಂರಕ್ಷಣಾ ತೆರಿಗೆ' ವಿಧಿಸಿದೆ. ಈ ಆದೇಶವು ತಕ್ಷಣದಿಂದ ಜಾರಿಗೆ ಬರುತ್ತದೆ. ಈ 'ಪರಿಸರ ಸಂರಕ್ಷಣಾ ತೆರಿಗೆ'ಯ ಪಾವತಿ ಕೆಳಕಂಡಂತಿರತಕ್ಕದ್ದು.

**(ಅ) ಹಾಲಿ ಜಾರಿಯಲ್ಲಿರುವ ಗಣಿಗಾರಿಕೆ/ ಕಲ್ಲು ಗಣಿಗಾರಿಕೆ ಗುತ್ತಿಗೆದಾರರಿಂದ ಪಾವತಿ:**

ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ರವರು ಹಾಲಿ ಗಣಿಗುತ್ತಿಗೆ ಪಡೆದಿದ್ದು, ಗಣಿಗಾರಿಕೆ/ ಕಲ್ಲು ಗಣಿಗಾರಿಕೆ ಗುತ್ತಿಗೆಗೆ ಪಡೆದಿರುವ ಒಟ್ಟು ಗುತ್ತಿಗೆ ಪ್ರದೇಶದ ಮೇಲೆ ಪ್ರತಿ ಹೆಕ್ಟೇರ್‌ಗೆ ರೂ. 84,000 ದರದಲ್ಲಿ ಈ ಆದೇಶದ ದಿನಾಂಕದಿಂದ ಗರಿಷ್ಠ 3 ತಿಂಗಳ ಒಳಗಾಗಿ ಪೂರ್ಣ ಪರಿಸರ ಸಂರಕ್ಷಣಾ ತೆರಿಗೆ ಪಾವತಿಸುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು.

**(ಆ) ಹೊಸದಾಗಿ ಗಣಿಗಾರಿಕೆ/ಕಲ್ಲು ಗಣಿಗಾರಿಕೆಗೆ ಗುತ್ತಿಗೆ ಪಡೆಯುವವರಿಂದ ಪಾವತಿ:**

ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ರವರು ಗಣಿಗಾರಿಕೆ/ಕಲ್ಲು ಗಣಿಗಾರಿಕೆಗೆ ಗುತ್ತಿಗೆ ಆದೇಶ ಹೊರಡಿಸುವಾಗ ಪ್ರತಿ ಹೆಕ್ಟೇರ್‌ಗೆ ರೂ. 84,000 ದರದಲ್ಲಿ ಪರಿಸರ ಸಂರಕ್ಷಣಾ ತೆರಿಗೆ ಪಾವತಿಸಿರುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು.

ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆರವರು ಪ್ರತಿ ತಿಂಗಳು ಹೊಸ ಮತ್ತು ಹಾಲಿ ಗಣಿಗಾರಿಕೆ ನಡೆಸುತ್ತಿರುವವರಿಂದ ಪಾವತಿಸಲ್ಪಟ್ಟ ಪರಿಸರ ಸಂರಕ್ಷಣಾ ತೆರಿಗೆಯ ಪಾವತಿ ವಿವರಗಳನ್ನು ಪ್ರತ್ಯೇಕವಾಗಿ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರಿಗೆ ಸಲ್ಲಿಸತಕ್ಕದ್ದು.

ಗಣಿ/ಕಲ್ಲು ಗಣಿ ಗುತ್ತಿಗೆದಾರರು ಮೇಲ್ಕಂಡ ದರದಲ್ಲಿ ಪರಿಸರ ಸಂರಕ್ಷಣಾ ತೆರಿಗೆಯನ್ನು ಸರ್ಕಾರದ ಖಜಾನೆಗೆ ಲೆಕ್ಕ ಶೀರ್ಷಿಕೆ "0406–01–800–0–11 ಪರಿಸರ ಸಂರಕ್ಷಣಾ ತೆರಿಗೆ"ಗೆ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಜಿಲ್ಲಾಡಳಿತವು ಅಗತ್ಯ ಗಣಿಗಾರಿಕೆ/ ಕಲ್ಲು ಗಣಿಗಾರಿಕೆಗೆ ಚಾಲನಾ ಸಮ್ಮತಿ ಪತ್ರ ಮತ್ತು ಇತರೆ ಶಾಸನಬದ್ಧ ಸಮ್ಮತಿಗಳನ್ನು ನೀಡುವ ಮುನ್ನ ಗಣಿ/ಕಲ್ಲು ಗಣಿ ಗುತ್ತಿಗೆದಾರರು ಈ ಆದೇಶಾನುಸಾರ ವಿಧಿಸಲ್ಪಟ್ಟಿರುವ ಪರಿಸರ ಸಂರಕ್ಷಣಾ ತೆರಿಗೆ ಪಾವತಿಸಿರುವುದನ್ನು ಖಾತ್ರಿ ಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 487 ಇಎಕ್ಸ್‌ಪಿ–2/2008 ದಿನಾಂಕ 4–12–2008ರಲ್ಲಿ ನೀಡಿರುವ ಸಹಮತಿಯ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.567

ಎನ್.ಆರ್. ಜಗನ್ನಾಥ

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**FOREST, ECOLOGY AND ENVIRONMENT SECRETARIAT**

**Sub :** Payment of “Environment protection fee” reg.

**Preamble:**

Mining/ quarrying where ever it is done leads to Environmental degradation on all count. These activities are known to have potential impact on the Environment both in terms of depletion of natural resources and in terms of polluting air, water and soil environment.

Taking the environmental loss due to mining/ quarrying in to account, while diverting forest land for the non forestry purposes, Government of India have stipulated mandatory raising of compensatory afforestation equal to the extent of mining in non forest land and that to be declared subsequently as reserve/protected forest. The cost of compensatory afforestation in levied on the mining cases in forest land. Even there is a provision in the Forest (conservation) Act, 1980, guidelines vide para 3.2 (VI) to raise compensatory afforestation over double the extent in degraded Forest land in certain category of public interest projects. The whole objective of raising compensatory afforestation is mainly to compensate/minimize the environmental losses sustained.

Hon’ble Supreme Court in the order dated 1-8-2003 in I.A. No. 826 and 859 in LA No. 566 in W.P. (civil) No. 202 of 1995 in the matter of compensatory afforestation has even directed for collection of ‘Net present Value’ (NPV) from the user agency for Forest land approved for diversion. In compliance of this, the State Government in Forest, Ecology and Environment Department vide notification No. FEE 273 FGL 2002, dated 17-1-2004 have fixed the NPV of Rs. 5.80 lakhs per hectare to Rs. 9.20 lakhs per Hectare duly categorizing the Talukas of the State depending upon the classification of vegetation in the Forest land.

The whole purpose of levying compensatory afforestation and Net Present Value (NPV) is to mittigate/ minimize the environmental losses sustained due to diversion of forest land. Even though such a mechanism exists for use of Forest land for mining purpose, the same is not made applicable to mining/ quarrying activity in non forest land/ agriculture land/ revenue land, in spite of the fact that environmental degradation impact is more or less same in magnitude.

The issue was discussed in the State Environment clearance committee meeting held on 17-7-2008 and therein it was decided to take a policy decision on this issue of mining/ quarrying, etc. which leads to environmental degradation.

Therefore considering the merits and principles stated above, and following the principles of “Polluter to Pay”, the Government has agreed in principle to impose ‘Environment Protection Fee’ for mining/ quarrying in the non Forest-land/ patta land / Revenue land, for mitigating the environmental losses so sustained.

Compensatory afforestation charges are revised to Rs. 84,000/- Ha. Vide Govt. order No. FEE 102 FAP 2008, dated 15-10-2008. The Government are of the opinion that the Environment Protection Fee proposed to be imposed for mining/ quarrying in non Forest Land/ patta land / Revenue land should at least be on par with the compensatory afforestation charges fixed by the Government vide Government Order No. FEE 102 FAP 2008, dated 15-10-2008. It is therefore decided to impose “Environment Protection Fee” of Rs. 84,000/Ha. for mining/ quarrying in non forest land/ patta land/ revenue land etc. Hence the order.

**Government Order No. FEE 25 ENG 2008, Bangalore, Dated 4th February 2009**
**(UNIQUE No. 35)**

In view of the circumstances and decision taken, as explained above, the Government here by imposes an Environment Protection Fee at the rate of Rs. 84,000/Ha. (Rupees eighty four thousand per Hectare) only on the non forest land/ patta land/ Revenue land that is permitted to use for mining/ quarrying. This order shall come in to force with immediate effect. Remittance of the "Environment Protection Fee" shall be ensured as follows:

**(a) In the case of ongoing mining/ quarrying cases where Mining/ Quarrying Lease has been issued:**

The Director, Mines and Geology Department shall inform this mandatory provisions to all the mining/quarrying lease holders and ensure that Environment Protection Fee for the Lease area at the rate of Rs. 84,000/- Ha. is remitted within 3 months from the date of this Order.

**(b) In the fresh mining cases where the Mining/ quarrying Lease is to be issued:**

The Director, Mines and Geology Department shall ensure that Environment Protection Fee for the Lease area at the rate of Rs. 84,000/ha. is remitted while issuing the lease order.

The Director of Mines and Geology shall report the monthly receipt of Environment Protection Fee separately for the ongoing and fresh cases to the Secretary to Govt., Department of Ecology and Environment.

The proponent shall remit the Environment Protection Fee at the above rate for the sanctioned lease area for mining/ quarrying to the Government Treasury to Head of Account "0406-01-800-0-11 Environment Protection Fee".

The Karnataka State Pollution Control Board and the District administration shall ensure the full payment of the Environment Protection Fee imposed as per this order before the issue of necessary CFO/ other statutory clearances for mining/ quarrying.

This order is issued with the concurrence of the Finance Department vide No. FD 487 Exp-2/2008, dated 4-12-2008.

By order and in the name of the Governor of Karnataka,
**N.R. JAGANMATHA**
Under Secretary to Government,
Forest, Ecology and Environment Department.

PR. 565

**ಆರ್ಥಿಕ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಆಇ 790 ವೆಚ್ಚ–12/08, ಬೆಂಗಳೂರು, ದಿನಾಂಕ: 23ನೇ ಜನವರಿ 2009.**

"ಕೆ.ಎಸ್.ಆರ್.ಪಿ. ಸಂಸ್ಥಾಪನಾ ಸುವರ್ಣ ವರ್ಷೋತ್ಸವದ" ಅಂಗವಾಗಿ ಕೆ.ಎಸ್.ಆರ್.ಪಿ. ಯ ಎಲ್ಲಾ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ 12000 ಕೈಗಡಿಯಾರಗಳನ್ನು ಕೊಡುಗೆಯಾಗಿ ನೀಡಲು 1.00 ಕೋಟಿ ರೂ.ಗಳ ವೆಚ್ಚದಲ್ಲಿ ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ಯಮವಾದ ಹೆಚ್.ಎಂ.ಟಿ. ಕೈಗಡಿಯಾರ ತಯಾರಿಕಾ ಸಂಸ್ಥೆಯಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿಯಲ್ಲಿ, ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

ಪಿ.ಆರ್.475

**PERSONNEL AND ADMINISTRATIVE REFORMS SECRETARIAT**

**Sub :** Constitution of State Cadre Review Committee to review the IPS cadre of Karnataka – reg.

**Read :** Notification No. DPAR 185 SPS 2005, dated 11-3-2008.

**Preamble:**

As per rule 4 of IPS (Cadre) Rules, the strength and composition of IPS cadre of a State shall be determined by Regulations made by the Central Government in consultation with the State Governments. The Central Government shall at intervals of every 5 years re-examine the strength and composition of the cadre in consultation with the State Government concerned and may make such alterations therein. The Central Government may alter the strength and composition of the cadre at any other time i.e. by mid-term cadre review. The State Government may add for a period not exceeding one year and with the approval of the Central Government for a further period not exceeding 2 years, one or more posts carrying duties or responsibilities of like nature to cadre posts. The posts in a cadre are divided into 3 main categories: namely, 1) Senior Duty Posts under the State Government, which are generally called as cadre posts. 2) Central Deputation Reserve Posts 3) State Deputation Reserve posts. The other categories such as, leave reserve and training reserve and the Junior posts are ancillary to the 3 main categories. The provision for regular cadre review once in 5 years and mid-term cadre review at any other time is made to adjust the strength and composition of the cadre according to the growing and changing needs of the State.

The last cadre review of IPS of Karnataka was made in 2007, and the Government of India have issued necessary notifications on 31-12-2007. In the said cadre review the total authorised strength of IPS was increased from earlier 156 to 172. The aspect of formation of nine new districts was duly taken into consideration while finalizing the cadre review.

In view of the increased terrorist activities, Bomb threats, nexallite activities and cyber crimes and also the general Law and Order problems etc. it is felt necessary to have adequate number of IPS officers, particularly at SP level to effectively handle the Law and Order problems and to control the crimes. It is also considered necessary to increase the annual intake of direct recruit IPS officers to overcome the shortage of IPS officers. It is observed that the Central Deputation Reserve is under-utilized very much. Whereas, the State Deputation Reserve posts i.e. ex-cadre posts have exceeded the authorized number of posts in the category. Several cadre posts have been kept in abeyance and ex-cadre posts in lower scale or higher scale are created in lieu of the cadre posts, so as to adjust to the pay-scales of the incumbants. The present situation is not only causing problems in the matter of proper efficient cadre management, but it is also coming in the way of career prospects and promotions of the officers. It is therefore felt necessary to constitute a State Level Review Committee to examine the problems, deficiencies etc. in the present system and suggest appropriate concrete remedial measures to bring changes in the strength and composition of the IPS cadre of Karnataka to enable the State Government to send Cadre Review proposals to the Central Government. Accordingly, the following orders are issued.

**Government Order No. DPAR 03 SPS 2009, Bangalore, Dated 27th January 2009**

Sanction is accorded to constitute the State level IPS Cadre Review Committee with the following composition to examine the problems and difficulties being faced in the IPS Cadre management and to formulate and suggest measures and proposals for mid-term/regular cadre review of IPS of Karnataka to enable the State Government to take up the matter with the Central Government for the IPS Cadre Review of Karnataka at the earliest.

| | | |
|---|---|---|
| 1. | Additional Chief Secretary to Government | Chairperson |
| 2. | Additional Chief Secretary to Government, Home Department | Member |

| | | |
|---|---|---|
| 3. | Principal Secretary to Government, DPAR (AR & Training) | Member |
| 4. | Director General & Inspector General of Police (Head of Police Force), Karnataka | Member |
| 5. | Additional Director General of Police/ Inspector General of Police, (Administration) | Member |
| 6. | Deputy Secretary to Government, DPAR (Services) | Convener |

The Committee shall submit its report to the Government within 15 days.

By order and in the name of the Governor of Karnataka,

PR. 434

**ASHOK P. ATRE**

Under Secretary to Government, DPAR (Services-4)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಸಣ್ಣೂರ್‌ಕರ್, ನಿವೃತ್ತ ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಇವರ ವಿರುದ್ಧದ ಶಿಸ್ತು ಕ್ರಮ ಕುರಿತು – ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ಪತ್ರಸಂಖ್ಯೆ: ಕಾಮಾಇ/ಸಿಬ್ಬಂದಿ/2/ಸಿಆರ್–123/03–04, ದಿನಾಂಕ 7–10–2003.
2. ಸರ್ಕಾರದ ನೋಟೀಸ್ ಸಂಖ್ಯೆ: ಆನಾಸ 95 ಕಾಮಾಸೇ 2003, ದಿನಾಂಕ 30–6–2004.
3. ಶ್ರೀ ಎಸ್.ಆರ್. ಸಣ್ಣೂರ್‌ಕರ್, ನಿವೃತ್ತ ಕಾನೂನು ಮಾಪನಶಾಸ್ತ್ರ, ಉಪನಿಯಂತ್ರಕರು ಇವರ ಲಿಖಿತ ಉತ್ತರ ದಿನಾಂಕ 30–7–2004.
4. ಸರ್ಕಾರದ ಆದೇಶ ಸಂಖ್ಯೆ: ಆನಾಸ 95 ಕಾಮಾಸೇ 03, ದಿನಾಂಕ 4–8–2006.
5. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ 16–4–07.
6. ಶ್ರೀ ಎಸ್.ಆರ್. ಸಣ್ಣೂರ್‌ಕರ್, ಇವರ ರಕ್ಷಣಾ ಹೇಳಿಕೆ ದಿನಾಂಕ 30–6–2007.
7. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ಪತ್ರ ಸಂಖ್ಯೆ: ಕಾಮಾಇ/ಸಿಬ್ಬಂದಿ/1/ಸಿಆರ್–77/05–06, ದಿನಾಂಕ 28–6–2005.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ನಿಯಂತ್ರಕರ ಪತ್ರದಲ್ಲಿ ಶ್ರೀ ಎನ್. ವಿಶ್ವನಾಥ್, ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ (ಸ್ವತಂತ್ರ ಪ್ರಭಾರ) ಇವರು ವೃಂದ ಬದಲಾವಣೆ ಹೊಂದಿದ್ದು ಅರ್ಹತೆ ಇಲ್ಲದಿದ್ದರೂ ಸಹ ಸದರಿಯವರಿಗೆ ಆಯ್ಕೆ ಕಾಲಿಕ ಮತ್ತು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ಕಾರಣರಾದ ಶ್ರೀ ಎಸ್.ಆರ್. ಸಣ್ಣೂರ್‌ಕರ್, ಉಪನಿಯಂತ್ರಕರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಪ್ರಸ್ತಾಪಿಸಲ್ಪಟ್ಟಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ನೋಟೀಸ್ ದಿನಾಂಕ 30–6–04ರಲ್ಲಿ ಶ್ರೀ ಎಸ್.ಆರ್. ಸಣ್ಣೂರ್‌ಕರ್, ಉಪನಿಯಂತ್ರಕರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕರ್ನಾಟಕ ನಾಗರಿಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಡಿಯಲ್ಲಿ ಆರೋಪ ಪಟ್ಟಿ ಜಾರಿ ಮಾಡಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸದರಿ ಅಧಿಕಾರಿಯವರು ಲಿಖಿತ ಸಮಜಾಯಿಷಿ ನೀಡಿ ತಮ್ಮ ವಿರುದ್ಧದ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶ ದಿನಾಂಕ 4–8–2006ರಲ್ಲಿ ಅಧಿಕಾರಿಯವರು ನೀಡಿದ ಲಿಖಿತ ಹೇಳಿಕೆಯನ್ನು ಒಪ್ಪದೇ ಕೆ.ಸಿ.ಎಸ್.ಆರ್. ನಿಯಮ 214ರ ಮೇರೆಗೆ ಸಿ.ಸಿ.ಎ. ನಿಯಮ 11ರಂತೆ ವಿಚಾರಣೆ ನಡೆಸಲು ಉದ್ದೇಶಿಸಿ ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿತ್ತು.

ಮೇಲೆ ಓದಲಾದ (5)ರಲ್ಲಿ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿ ದಿನಾಂಕ 16–4–2007ರಲ್ಲಿ ಹೀಗೆ ಹೇಳಲಾಗಿದೆ:

> "...... ಶ್ರೀ ಎಸ್.ಆರ್. ಸಣ್ಣೂರ್‌ಕರ್‌ರವರ ವಿರುದ್ಧದ ಆರೋಪವು ರುಜುವಾತು ಆಗಿರುತ್ತದೆ. ಅವರು ದುರುದ್ದೇಶದಿಂದ ವರ್ತಿಸಿಲ್ಲವೆಂದು ಭಾವಿಸಿಕೊಂಡರೂ ಸಹ ಸರಕಾರಿ ಆದೇಶಗಳ ನಿಯಮಗಳನ್ನು

ಉಲ್ಲಂಘಿಸಿರುವುದು ದೃಢಪಟ್ಟಿದೆ. ಆದರೆ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟವನ್ನು ಸರಿಪಡಿಸಿ ಅವರು ಕ್ರಮ ತೆಗೆದುಕೊಂಡು ರಿಕವರಿ ಆದೇಶ ಮಾಡಿರುವುದು ಒಂದು ಸಮಾಧಾನಕರ ವಿಷಯವಾಗಿದೆ".

ಮೇಲೆ ಓದಲಾದ (6)ರ ಆರೋಪಿತ ಅಧಿಕಾರಿಯವರ ರಕ್ಷಣಾ ಹೇಳಿಕೆ ದಿನಾಂಕ 30–6–2007ರಲ್ಲಿ ಆಡಳಿತಾತ್ಮಕ ಗೊಂದಲಗಳಿಂದಾಗಿ ವೇತನ ನಿಗದಿಪಡಿಸಲಾಗಿದೆಯೇ ವಿನಹ ಯಾವುದೇ ದುರುದ್ದೇಶದಿಂದ ಆದೇಶ ಮಾಡಿರುವುದಿಲ್ಲ ಹಾಗೂ ಹೆಚ್ಚುವರಿಯಾಗಿ ನೀಡಿದ ಆರ್ಥಿಕ ಸೌಲಭ್ಯ ವಸೂಲಾತಿಗೆ ಆದೇಶ ಹೊರಡಿಸಿರುವುದರಿಂದ ಮತ್ತು ತಾವು ನಿವೃತ್ತಿಯಾಗಿರುವುದರಿಂದ ತಮ್ಮ ವಿರುದ್ಧದ ಆರೋಪ ಕೈಬಿಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (7)ರ ನಿಯಂತ್ರಕರ ಪತ್ರ ದಿನಾಂಕ 28–6–2005ರಲ್ಲಿ ಶ್ರೀ ಎನ್. ವಿಶ್ವನಾಥ, ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರ ವೇತನವನ್ನು ಮರು ನಿಗದಿಪಡಿಸಿ ನೀಡಲಾದ ಹೆಚ್ಚುವರಿ ವೇತನವನ್ನು ಸರ್ಕಾರಕ್ಕೆ ಜಮೆ ಮಾಡಬೇಕೆಂದು ಶ್ರೀ ಎಸ್.ಆರ್. ಸಣ್ಣೂರ್‌ಕರ್‌ರವರು ಹೊರಡಿಸಿದ ಆದೇಶ ದಿನಾಂಕ 13–6–2003ರ ವಿರುದ್ಧ ಶ್ರೀ ಎನ್. ವಿಶ್ವನಾಥ್‌ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಅರ್ಜಿ ಸಂಖ್ಯೆ: 8856/2003ರಲ್ಲಿ ಪ್ರಕರಣ ದಾಖಲಿಸಿದ್ದು ತಡೆಯಾಜ್ಞೆ ತಂದಿರುತ್ತಾರೆ. ಹಾಗೂ ಪ್ರಕರಣ ಇತ್ಯರ್ಥವಾಗಿಲ್ಲವೆಂದು ತಿಳಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳು, ಆರೋಪಿತ ಅಧಿಕಾರಿಯ ಹೇಳಿಕೆ ಹಾಗೂ ಪ್ರಕರಣ ಕೆ.ಎ.ಟಿ.ಯಲ್ಲಿ ಬಾಕಿ ಇರುವುದನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 95 ಕಾಮಾಸೇ 2003, ಬೆಂಗಳೂರು, ದಿನಾಂಕ: 12ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957ರ ನಿಯಮ 8(ii)ರಲ್ಲಿ ಪ್ರದತ್ತವಾದ ಅಧಿಕಾರದ ಅನ್ವಯ ಶ್ರೀ ಎಸ್.ಆರ್. ಸಣ್ಣೂರ್‌ಕರ್, ಉಪನಿಯಂತ್ರಕರು (ನಿವೃತ್ತ), ಕಾನೂನು ಮಾಪನಶಾಸ್ತ್ರ ಇಲಾಖೆ, ಇವರಿಗೆ ವಾಗ್ದಂಡನೆ ವಿಧಿಸಲಾಗಿದೆ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 8856/2003 ಪ್ರಕರಣದಲ್ಲಿ ನ್ಯಾಯಮಂಡಳಿ ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಈ ಆದೇಶವನ್ನು ಪುನರ್ ಪರಿಶೀಲಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.486

**ಕೆ. ಭವಾನಿ**

ಪೀಠಾಧಿಕಾರಿ (ಪ್ರ), ಆಹಾರ–1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಸ್. ಹನುಮಂತಪ್ಪ, ಗ್ರೂಪ್–ಬಿ ಅಧಿಕಾರಿ ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ವಿರೂಪಾಕ್ಷೇಶ್ವರಸ್ವಾಮಿ ದೇವಸ್ಥಾನ, ಹಂಪಿ ಇವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿಗಳ ನೇಮಕಾತಿ ಬಗ್ಗೆ ಆದೇಶ.

**ಓದಲಾಗಿದೆ:**
1. ಧಾರ್ಮಿಕ ದತ್ತಿ ಆಯುಕ್ತರ ಆದೇಶ ಸಂ: ಸಿಬ್ಬಂದಿ 3 ಸಿಆರ್.11/2007–08, ದಿನಾಂಕ 7–7–2007.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ: ಸಿಬ್ಬಂದಿ 3 ಸಿ.ಅರ್. 11(ಎ)/ 2007–08, ದಿನಾಂಕ 24–11–2007.
3. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ: ಸಿಬ್ಬಂದಿ 3 ಸಿಆರ್.11(ಎ)/ 2007–08, ದಿನಾಂಕ: 13–11–2007.
4. ಶ್ರೀ ಹೆಚ್.ಎಸ್. ಹನುಮಂತಪ್ಪ, ಕಾರ್ಯನಿರ್ವಹಣಾಧಿಕಾರಿ ಇವರಿಗೆ ದೋಷಾರೋಪಣ ಪಟ್ಟಿಯೊಂದಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರ ಸಂ: ಕಂಇ 178 ಮುಸೇವಿ 07, ದಿನಾಂಕ 16–4–2008.
5. ಶ್ರೀ ಹೆಚ್.ಎಸ್. ಹನುಮಂತಪ್ಪ, ಕಾರ್ಯನಿರ್ವಹಣಾಧಿಕಾರಿ ರವರ ಲಿಖಿತ ಹೇಳಿಕೆ ದಿನಾಂಕ 13–5–2008.
6. ಸರ್ಕಾರದ ಆದೇಶ ಸಂಖ್ಯೆ: ಕಂಇ 178 ಮುಸೇವಿ 2007, ದಿನಾಂಕ 3–11–2008.

**ಪ್ರಸ್ತಾವನೆ :**

ಶ್ರೀ ಹೆಚ್.ಎಸ್. ಹನುಮಂತಪ್ಪ ಇವರು ಶ್ರೀ ವಿರೂಪಾಕ್ಷೇಶ್ವರಸ್ವಾಮಿ ದೇವಸ್ಥಾನ, ಹಂಪಿ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಇಲ್ಲಿ ಕಾರ್ಯನಿರ್ವಾಹಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ದೇವಸ್ಥಾನಕ್ಕೆ ಸೇರಿದ

ಜಮೀನುಗಳಿಗೆ ಸಂಬಂಧಪಟ್ಟಂತೆ ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆ ನೀಡಿ ಕರ್ತವ್ಯ ಲೋಪವೆಸಗಿರುತ್ತಾರೆ ಮತ್ತು ದೇವಸ್ಥಾನದ ಸೇವಾ ಕಾರ್ಯನಿರ್ವಹಿಸಿದ ಅರ್ಚಕರಿಗೆ 12 ತಿಂಗಳ ಸೇವಾ ರುಸುಂ ಪಾವತಿ ಮಾಡದೆ ಬೇಜವಾಬ್ದಾರಿಯಿಂದ ವರ್ತಿಸಿರುತ್ತಾರೆ ಮತ್ತು ದೇವಸ್ಥಾನದ ದೈನಂದಿನ ಪೂಜಾ ಕೈಂಕರ್ಯಗಳಿಗೆ ಅಡಚಣೆ ಉಂಟು ಮಾಡಿದ್ದು ಐತಿಹಾಸಿಕ ದೇವಸ್ಥಾನದ ಪಾವಿತ್ರ್ಯಕ್ಕೆ ಕಳಂಕ ಬರುವಂತೆ ವರ್ತಿಸಿರುವುದಾಗಿ ಸಹಾಯಕ ಆಯುಕ್ತರ ವಿಚಾರಣಾ ವರದಿಯಿಂದ ಕಂಡುಬಂದಿರುವುದರಿಂದ ಮೇಲೆ ಓದಲಾದ (1)ರ ಆದೇಶದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಶ್ರೀ ಹೆಚ್.ಎಸ್. ಹನುಮಂತಪ್ಪ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಇವರನ್ನು ಅಮಾನತ್ತು ಪಡಿಸಿರುತ್ತಾರೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ಹೆಚ್.ಎಸ್. ಹನುಮಂತಪ್ಪ ಇವರನ್ನು ಅಮಾನತ್ತಿನಿಂದ ತೆರವುಗೊಳಿಸಿ, ಸೇವೆಗೆ ಪುನರ್‌ಸ್ಥಾಪಿಸಿ ಗುಲ್ಬರ್ಗಾ ಜಿಲ್ಲೆ, ಅಫಜಲ್‌ಪುರ ತಾಲ್ಲೂಕು, ಗಾಣಗಾಪುರದ ಶ್ರೀ ದತ್ತಾತ್ರೇಯಸ್ವಾಮಿ ದೇವಸ್ಥಾನಕ್ಕೆ ಕಾರ್ಯನಿರ್ವಾಹಕ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಧಾರ್ಮಿಕ ದತ್ತಿ ಆಯುಕ್ತರು ಶ್ರೀ ಹೆಚ್.ಎಸ್. ಹನುಮಂತಪ್ಪ, ಕಾರ್ಯನಿರ್ವಾಹಣಾಧಿಕಾರಿರವರು ಸಮೂಹ–ಬಿ ಅಧಿಕಾರಿಯಾಗಿರುವುದರಿಂದ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕೈಗೊಳ್ಳಲು ದೋಷಾರೋಪಣ ಪಟ್ಟಿ ತಯಾರಿಸಿ, ಮೇಲೆ ಓದಲಾದ (3)ರ ಪತ್ರದಲ್ಲಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಅದರಂತೆ ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಶ್ರೀ ಹೆಚ್.ಎಸ್. ಹನುಮಂತಪ್ಪ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಪ್ರಕಾರ ಶಿಸ್ತು ಕ್ರಮ ಕೈಗೊಳ್ಳಲು ತೀರ್ಮಾನಿಸಿ, ಆರೋಪಿತ ಅಧಿಕಾರಿಗೆ ದೋಷಾರೋಪಣ ಪಟ್ಟಿಯನ್ನು ಜಾರಿ ಮಾಡಿ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ (5)ರ ಪತ್ರದಲ್ಲಿ ಶ್ರೀ ಹೆಚ್.ಎಸ್. ಹನುಮಂತಪ್ಪ, ಇವರು ತಮ್ಮ ಲಿಖಿತ ಹೇಳಿಕೆಯನ್ನು ನೀಡಿ ತಮ್ಮ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಅಲ್ಲಗಳೆಯುತ್ತಾ, ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಸದರಿಯವರು ನೀಡಿರುವ ಲಿಖಿತ ಹೇಳಿಕೆಯಲ್ಲಿ ಯಾವುದೇ ಪರಿಗಣನೀಯ ಅಂಶಗಳು ಕಂಡುಬರುವುದಿಲ್ಲವಾದ್ದರಿಂದ ಶ್ರೀ ಹೆಚ್.ಎಸ್. ಹನುಮಂತಪ್ಪ, ಕಾರ್ಯನಿರ್ವಾಹಣಾಧಿಕಾರಿ ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ವಿಧಿವಿಧಾನಗಳನ್ನನುಸರಿಸಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ (6)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆದರೆ ಶ್ರೀ ಕೆ. ರಾಜಶೇಖರ್‌ರವರು ತಮ್ಮ ಆರೋಗ್ಯ ಸರಿಯಿಲ್ಲದಿರುವುದರಿಂದ ತಾವು ವೈದ್ಯಕೀಯ ಚಿಕಿತ್ಸೆ ಪಡೆಯುತ್ತಿರುವುದರಿಂದ ತಮಗೆ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುವುದರಿಂದ ಸರ್ಕಾರವು ಶ್ರೀ ಕೆ. ರಾಜಶೇಖರ್‌ರವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಕ ಮಾಡಲು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 178 ಮುಸೇವಿ 2007, ಬೆಂಗಳೂರು, ದಿನಾಂಕ: 15ನೇ ಜನವರಿ 2009.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಹೆಚ್.ಎಸ್. ಹನುಮಂತಪ್ಪ, ಗ್ರೂಪ್–ಬಿ ಅಧಿಕಾರಿ ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ವಿರೂಪಾಕ್ಷೇಶ್ವರಸ್ವಾಮಿ ದೇವಸ್ಥಾನ, ಹಂಪಿ ಇವರ ವಿರುದ್ಧದ ಆರೋಪಗಳ ಬಗ್ಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ವಿಧಿವಿಧಾನಗಳನ್ನನುಸರಿಸಿ ಇಲಾಖಾ ವಿಚಾರಣೆ ನಡೆಸಲು ನೇಮಿಸಲಾಗಿದ್ದ ಶ್ರೀ ಕೆ. ರಾಜಶೇಖರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ಬದಲಿಗೆ ಶ್ರೀ ಎಸ್. ಇಂಧೂದರ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(2) ಮತ್ತು (5)ರನ್ವಯ ವಿಚಾರಣಾಧಿಕಾರಿಯನ್ನಾಗಿ ಹಾಗೂ ಪ್ರಕರಣವನ್ನು ಶಿಸ್ತು ಪ್ರಾಧಿಕಾರದ ಪರವಾಗಿ ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಸುಬ್ಬಮೂಲ್ಯ, ಕಛೇರಿ ಸಹಾಯಕರು, ಧಾರ್ಮಿಕ ದತ್ತಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ 19 ಸೇಇವಿ 2002, ದಿನಾಂಕ 28–6–2002ರಲ್ಲಿ ಸೂಚಿಸಿದಂತೆ ನಾಲ್ಕು ತಿಂಗಳೊಳಗಾಗಿ ಪೂರ್ಣಗೊಳಿಸಿ, ಸಂಬಂಧಿಸಿದ ಅಭಿಲೇಖನಗಳೊಂದಿಗೆ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ, ನಿಯಮಾನುಸಾರ ವಿಚಾರಣಾಧಿಕಾರಿಗಳಿಗೆ ಸಂಚಿತ ಸಂಭಾವನೆ ಹಾಗೂ ಪ್ರವಾಸ ಭತ್ಯೆಗಳನ್ನು ಮಂಜೂರು ಮಾಡಲಾಗುವುದು.

ಧಾರ್ಮಿಕ ದತ್ತಿ ಆಯುಕ್ತರು ವಿಚಾರಣಾಧಿಕಾರಿಗಳಿಗೆ ಪ್ರಕರಣದಲ್ಲಿ ವಿಚಾರಣೆ ನಡೆಸಲು ಸೂಕ್ತ ಸ್ಥಳಾವಕಾಶ ಮತ್ತು ಸಿಬ್ಬಂದಿಯನ್ನು ಒದಗಿಸುವರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.473

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ)

## ಆರ್ಥಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಆಇ 07 ವೆಚ್ಚ–12/09, ಬೆಂಗಳೂರು, ದಿನಾಂಕ: 28ನೇ ಜನವರಿ 2009.**

"ಪರಿಷ್ಕೃತ ಭಾಗ್ಯಲಕ್ಷ್ಮಿ ಯೋಜನೆಯನ್ನು" ತ್ವರಿತವಾಗಿ ಅನುಷ್ಠಾನಗೊಳಿಸಲು, ಕೇಂದ್ರ ಸರ್ಕಾರದ ಸ್ವಾಮ್ಯ ಸಂಸ್ಥೆಯಾದ ಮೆ: ಭಾರತೀಯ ಜೀವ ವಿಮಾ ನಿಗಮದ (Life Insurance Corporation) ಮೂಲಕ "ಪಾಲುದಾರ ಹಣಕಾಸು ಸಂಸ್ಥೆ"ಯಾಗಿ, ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ದಿನಾಂಕ 31–7–2009 ರವರೆಗೆ, ನಿರ್ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿಯಲ್ಲಿ, ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.474

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಕಂದಾಯ ಸಚಿವಾಲಯ

**ವಿಷಯ :** ಸಂಧ್ಯಾ ಸುರಕ್ಷಾ ಯೋಜನೆಯಡಿ ಮಾಸಾಶನ ಮಂಜೂರು ಮಾಡುವ ಅಧಿಕಾರವನ್ನು ವಿಶೇಷ ತಹಸೀಲ್ದಾರ್ ಕಛೇರಿ ಇರುವ ಕಡೆಗಳಲ್ಲಿ ಉಪತಹಸೀಲ್ದಾರ್‌ರಿಂದ ವಿಶೇಷ ತಹಸೀಲ್ದಾರರಿಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 97 ಎಂಎಸ್‌ಟಿ 2007, ದಿನಾಂಕ 2–7–2007.

2. ಸರ್ಕಾರಿ ಆದೇಶ ಸಂಖ್ಯೆ: ಕಂಇ 85 ಡಿಎಸ್‌ಪಿ 2008, ದಿನಾಂಕ 23–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ಆರ್ಥಿಕವಾಗಿ ಸಂಕಷ್ಟದಲ್ಲಿರುವ 65 ವರ್ಷಗಳಿಗಿಂತಲೂ ಹೆಚ್ಚು ವಯಸ್ಸಾದ ಹಿರಿಯ ನಾಗರಿಕರಿಗೆ ನೆರವಾಗಲು ರೂ. 400/–ಗಳ ಮಾಸಾಶನವನ್ನು ಸಂಧ್ಯಾ ಸುರಕ್ಷಾ ಯೋಜನೆಯನ್ವಯ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ತಾಲ್ಲೂಕು ತಹಶೀಲ್ದಾರರು ಅರ್ಹ ಫಲಾನುಭವಿಗಳನ್ನು ಗುರುತಿಸಿ ಮಾಸಾಶನವನ್ನು ಮಂಜೂರು ಮಾಡುವ ಪ್ರಾಧಿಕಾರಿಯಾಗಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ಆದೇಶದನ್ವಯ ರಾಜ್ಯದಲ್ಲಿ ಸಂಧ್ಯಾ ಸುರಕ್ಷಾ ಯೋಜನೆಯಡಿ ಸಾಕಷ್ಟು ಅರ್ಜಿಗಳು ಬರುತ್ತಿದ್ದು, ಅವುಗಳನ್ನು ನಿಗಧಿತ ವೇಳೆಯೊಳಗೆ ವಿಲೇವಾರಿ ಮಾಡಲು ತಾಲ್ಲೂಕಿನ ವಿವಿಧ ಭಾಗಗಳಿಂದ ತಾಲ್ಲೂಕು ಕಛೇರಿಗಳಿಗೆ ಬಂಧು ಅರ್ಜಿಗಳನ್ನು ಸಲ್ಲಿಸುವುದು ಸಹ ಕಷ್ಟವಾಗುತ್ತದೆ. ಈ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಟಾನಗೊಳಿಸಲು ಹಾಗೂ ಹೆಚ್ಚಿನ ಪ್ರಗತಿಯನ್ನು ಸಾಧಿಸಲು ಮಾಸಾಶನ ಮಂಜೂರು ಮಾಡುವ ಅಧಿಕಾರವನ್ನು ನಾಡ ಕಛೇರಿಯ ಉಪ ತಹಶೀಲ್ದಾರರಿಗೆ ನೀಡಲಾಗಿದೆ.

ಮುಂದುವರೆದು ವಿಶೇಷ ತಹಶೀಲ್ದಾರರ ಕಛೇರಿ ಇರುವ ಕಡೆಗಳಲ್ಲಿ ವಿಶೇಷ ತಹಶೀಲ್ದಾರರು ಹಾಗೂ ಉಪ ತಹಶೀಲ್ದಾರರು ಇಬ್ಬರು ಇರುತ್ತಾರೆ. ಅಂತಹ ಸಂದರ್ಭದಲ್ಲಿ ವಿಶೇಷ ತಹಶೀಲ್ದಾರರು ನಾಡ ಕಛೇರಿಯ ಉಪ ತಹಶೀಲ್ದಾರರಿಗಿಂತ ಶ್ರೇಣಿಯಲ್ಲಿ ಮೇಲ್ಪಟ್ಟವರಾಗಿದ್ದು ಸಂಧ್ಯಾ ಸುರಕ್ಷಾ ಯೋಜನೆಯಡಿ ಮಾಸಾಶನ ಮಂಜೂರು ಮಾಡಬಹುದಾಗಿರುವುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 85 ಡಿಎಸ್‌ಪಿ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009.**

ಸರ್ಕಾರವು ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸಂಧ್ಯಾ ಸುರಕ್ಷಾ ಯೋಜನೆಯಡಿ ಮಾಸಾಶನವನ್ನು ವಿಶೇಷ ತಹಶೀಲ್ದಾರ್ ಕಛೇರಿ ಇರುವ ಕಡೆಗಳಲ್ಲಿ ವಿಶೇಷ ತಹಶೀಲ್ದಾರರು ಹಾಗೂ ಉಪ ತಹಶೀಲ್ದಾರರು

ಇಬ್ಬರು ಇದ್ದಲ್ಲಿ ಮಂಜೂರಾತಿ ಅಧಿಕಾರವನ್ನು ವಿಶೇಷ ತಹಶೀಲ್ದಾರರಿಗೆ ನೀಡಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.472

**ಎಸ್. ಕಾತ್ಯಾಯಿನಿ ದೇವಿ**

ಪೀಠಾಧಿಕಾರಿಗಳು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳು, ಕಂದಾಯ ಇಲಾಖೆ

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 792 ವೆಚ್ಚ–12/08, ಬೆಂಗಳೂರು, ದಿನಾಂಕ: 22ನೇ ಜನವರಿ 2009.**

"ರಾಷ್ಟ್ರೀಯ ಕೈಮಗ್ಗ ಮೇಳ–2009"ನ್ನು ರೂ. 75.00 ಲಕ್ಷಗಳ ಅಂದಾಜಿನಲ್ಲಿ "ಮೆ: ಎಂ.ಸಿ. ಮತ್ತು ಎ" (Marketing Consultant and Associates Limited), ಬೆಂಗಳೂರು ಇವರ ಮುಖಾಂತರ ದಿ: 11–2–2009 ರಿಂದ ದಿ: 3–3–2009ರವರೆಗೆ ಆಯೋಜಿಸಲು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿಯಲ್ಲಿ, ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.476

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಕಂದಾಯ ಸಚಿವಾಲಯ

**ವಿಷಯ :** ಸರ್ಕಾರಿ ಜಮೀನುಗಳ ಒತ್ತುವರಿಯನ್ನು ತೆರವುಗೊಳಿಸುವ ಉದೇಶದ ವೆಚ್ಚಕ್ಕಾಗಿ ಲೆಕ್ಕಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ಒದಗಿಸಿರುವ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008, ದಿ: 8–8–2008.

2. ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008, ದಿ: 20–10–2008.

**ಪ್ರಸ್ತಾವನೆ :**

ಸರ್ಕಾರದ ಜಮೀನನ್ನು ಗುರುತಿಸಲು ಹಾಗೂ ಅದನ್ನು ಒತ್ತುವರಿ ಮಾಡಿಕೊಂಡಿರುವುದನ್ನು ತೆರವುಗೊಳಿಸಲು ರಚಿಸಲಾಗಿರುವ / ರಚಿಸಲಾಗುವ ಕಾರ್ಯಪಡೆ ಉದ್ದೇಶಕ್ಕೆ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ಒಟ್ಟು ರೂ. 104 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸರ್ಕಾರದ ಆದೇಶ ದಿ: 8–8–2008ರಲ್ಲಿ ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ), ಅನಧಿಕೃತ ನಿರ್ಮಾಣಗಳ ತಡೆ, ಬೆಂಗಳೂರು ನಗರ ಜಿಲ್ಲೆ ಇವರಿಗೆ ರೂ. 50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶ ದಿ: 20–10–2008ರಲ್ಲಿ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಹೊಸ ವಾಹನ ಖರೀದಿಸಲು ರೂ. 5,63,905/–ಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಬೆಂಗಳೂರು ನಗರ ಜಿಲ್ಲೆಯಲ್ಲಿನ 5 ತಾಲ್ಲೂಕುಗಳ ತಹಶೀಲ್ದಾರರುಗಳಿಗೆ ಒತ್ತುವರಿಯನ್ನು ತೆರವುಗೊಳಿಸುವ ಹಾಗೂ ತೆರವುಗೊಳಿಸಿದ ಜಮೀನಿಗೆ ತಂತಿಬೇಲಿ ಹಾಕುವ ಸಲುವಾಗಿ ತಲಾ ರೂ. 5 ಲಕ್ಷಗಳನ್ನು ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 550 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ: 21ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2053–00–800–0–04–059 ಇತರೆ ವೆಚ್ಚಗಳ ಅಡಿಯಲ್ಲಿ ರೂ. 25 ಲಕ್ಷಗಳ (ಇಪ್ಪತ್ತೈದು ಲಕ್ಷಗಳು) ಮೊತ್ತವನ್ನು ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ), ಅನಧಿಕೃತ ನಿರ್ಮಾಣಗಳ ತಡೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

ಈ ಮೇಲೆ ತಿಳಿಸಿರುವ ಮೊತ್ತವನ್ನು ಬೆಂಗಳೂರು ನಗರ ಜಿಲ್ಲೆಯಲ್ಲಿನ 5 ತಾಲ್ಲೂಕು ತಹಶೀಲ್ದಾರರುಗಳ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸುವ ಹಾಗೂ ತೆರವುಗೊಳಿಸಿದ ಜಮೀನುಗಳಿಗೆ ತಂತಿಬೇಲಿ ಹಾಕಿಸುವ ಸಲುವಾಗಿ ಪ್ರತಿ ತಾಲ್ಲೂಕಿಗೆ ತಲಾ ರೂ. 5 ಲಕ್ಷಗಳಂತೆ ಬಿಡುಗಡೆ ಮಾಡತಕ್ಕದ್ದು.

ಈಗ ಬಿಡುಗಡೆ ಮಾಡಿರುವ ಮೊತ್ತವನ್ನು ಸಂಬಂಧಪಟ್ಟ ಕಛೇರಿಯ ಹಣ ಸೆಳೆಯುವ ಅಧಿಕಾರಿಗಳ ಲೆಕ್ಕ ಶೀರ್ಷಿಕೆಗೆ ಬಿಡುಗಡೆ ಮಾಡುವಂತೆಯೂ ಸಹ ಸರ್ಕಾರವು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.470 **ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಜಿಲ್ಲಾ ಪಂಚಾಯಿತಿ ಸೇವೆಗೆ ಸೇರಿದ ವಿವಿಧ ವರ್ಗಗಳ ನೌಕರರಿಗೆ ನಿವೃತ್ತಿ ಉಪದಾನ ವಿಸ್ತರಿಸುವ ಕುರಿತು ಆದೇಶ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಆರ್‌ಡಿಪಿ 133 ಎಸ್‌ಪಿಎಲ್ 79, ದಿನಾಂಕ 28–11–79.

2. ಸರ್ಕಾರದ ದಿನಾಂಕ 5–12–1988 ಮತ್ತು 20–5–1989ರ ಪತ್ರಗಳ ಸಂ. ಆರ್‌ಡಿಪಿ 83 ಪಿಬಿವಿ 88.

3. ಸರ್ಕಾರದ ಆದೇಶ ಸಂ. ಆರ್‌ಡಿಪಿ/126/ಜಡ್‌ಪಿಎ/97, ದಿನಾಂಕ 8–9–1997.

**ಪ್ರಸ್ತಾವನೆ :**

1959 ರಲ್ಲಿ ಜಾರಿಗೆ ಬಂದಿದ್ದ ಮೈಸೂರು ಗ್ರಾಮ ಪಂಚಾಯಿತಿಗಳು ಹಾಗೂ ಸ್ಥಳೀಯ ಸಂಸ್ಥೆಗಳ ಅಧಿನಿಯಮದಡಿಯಲ್ಲಿ ಗ್ರಾಮ ಪಂಚಾಯಿತಿಗಳು, ತಾಲ್ಲೂಕು ಅಭಿವೃದ್ಧಿ ಮಂಡಳಿಗಳು, ಜಿಲ್ಲಾ ಅಭಿವೃದ್ಧಿ ಪರಿಷತ್‌ಗಳು ಸ್ಥಾಪನೆಗೊಂಡಿದ್ದವು. ಈ ಸ್ಥಳೀಯ ಸಂಸ್ಥೆಗಳಿಗೆ ಸರ್ಕಾರವು ಅಧಿಕಾರಿಗಳನ್ನು ಹಾಗೂ ಸಿಬ್ಬಂದಿ ವರ್ಗವನ್ನು ನೇಮಿಸುವ ಸಂಬಂಧವೂ ಕೂಡ ಸದರಿ ಅಧಿನಿಯಮದಲ್ಲಿ ಉಪಬಂಧಗಳನ್ನು ಅಳವಡಿಸಲಾಗಿತ್ತು. ಈ ರೀತಿ ತಾಲ್ಲೂಕು ಅಭಿವೃದ್ಧಿ ಮಂಡಳಿಗಳಲ್ಲಿ ನೇಮಕಗೊಂಡು ದಿನಾಂಕ 28–7–1976 ರಂದೂ ಕೂಡ ಸೇವೆಯಲ್ಲಿದ್ದ ನೌಕರರನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ 28–11–1979ರ ಅಧಿಸೂಚನೆಯ ಮೂಲಕ ಆದೇಶ ಹೊರಡಿಸಲಾಗಿತ್ತು. ಆ ನಂತರ, ಅಂದರೆ ದಿನಾಂಕ 28–7–1976ರ ನಂತರ ತಾಲ್ಲೂಕು ಅಭಿವೃದ್ಧಿ ಮಂಡಳಿಗಳಲ್ಲಿ ದಿನಗೂಲಿ/ಸಂಚಿತ ವೇತನ ಆಧಾರದ ಮೇಲೆ ತಾತ್ಕಾಲಿಕವಾಗಿ ನೇಮಕಗೊಂಡ ನೌಕರರು ಸದರಿ ಸಂಸ್ಥೆಗಳಲ್ಲಿ ಮುಂದುವರೆದಿದ್ದರು.

2. ಕರ್ನಾಟಕ ಜಿಲ್ಲಾ ಪರಿಷತ್ತುಗಳು, ತಾಲ್ಲೂಕು ಪಂಚಾಯಿತಿ ಸಮಿತಿಗಳು, ಮಂಡಲ ಪಂಚಾಯಿತಿಗಳು ಮತ್ತು ನ್ಯಾಯ ಪಂಚಾಯಿತಿಗಳ ಅಧಿನಿಯಮ 1983 ದಿನಾಂಕ 1–4–1987 ರಿಂದ ಜಾರಿಗೆ ಬಂದ ಮೇರೆಗೆ ಸದರಿ ದಿನಾಂಕದಿಂದ ಜಿಲ್ಲಾ ಪರಿಷತ್ತುಗಳು ಸ್ಥಾಪನೆಗೊಂಡವು. ಜೊತೆಗೆ ಸದರಿ ಅಧಿನಿಯಮ ಜಾರಿಗೆ ಬಂದ ಪರಿಣಾಮ ಅಲ್ಲಿಯವರೆಗೆ ಅಸ್ಥಿತ್ವದಲ್ಲಿದ್ದ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು, ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳು ರದ್ದುಗೊಂಡವು. ಈ ರೀತಿ ದಿನಾಂಕ 28–7–1976 ರಿಂದ 1–4–1987 ರವರೆಗೆ ಹಿಂದಿನ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು/ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳಲ್ಲಿ ತಾತ್ಕಾಲಿಕವಾಗಿ ಸೇವೆ ಸಲ್ಲಿಸುತ್ತಿದ್ದ ನೌಕರರುಗಳ ಸೇವೆಯನ್ನು ಸದರಿ ಸಂಸ್ಥೆಗಳು ರದ್ದುಗೊಂಡ ನಂತರ ನೂತನವಾಗಿ ಸೃಜನೆಗೊಂಡಿದ್ದ ಜಿಲ್ಲಾ ಪರಿಷತ್ತುಗಳಲ್ಲಿ ಮುಂದುವರೆಸಲಾಗಿತ್ತು. ಕಾಲಾನಂತರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ವತಿಯಿಂದ ಮೇಲೆ (2)ರಲ್ಲಿ ಓದಲಾದ ದಿನಾಂಕ 5–12–1988 ಮತ್ತು 20–5–1989ರ ಪತ್ರಗಳ ಮೂಲಕ ನೀಡಿದ್ದ ನಿರ್ದೇಶನಗಳನ್ನು ಅನುಸರಿಸಿ, ಈ ರೀತಿ ಹಿಂದಿನ ತಾಲ್ಲೂಕು ಅಭಿವೃದ್ಧಿ ಮಂಡಳಿ/ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳಲ್ಲಿ ನೇಮಕಗೊಂಡಿದ್ದ ತಾತ್ಕಾಲಿಕ ನೌಕರರ ಸೇವೆಯನ್ನು ಜಿಲ್ಲಾ ಪರಿಷತ್ತು ಸೇವೆಯಲ್ಲಿ ವಿಲೀನಗೊಳಿಸುವ ಮೂಲಕ ಸಕ್ರಮಗೊಳಿಸಲಾಗಿತ್ತು. ಈ ರೀತಿ ಸಕ್ರಮಗೊಂಡ ನೌಕರರನ್ನು ಒಂದನೇ ಪ್ರವರ್ಗವೆಂದು ಸರ್ಕಾರವು ಗುರುತಿಸಿದೆ.

3. ಸಂವಿಧಾನದ 73 ಹಾಗೂ 74ನೇ ತಿದ್ದುಪಡಿ ಅನುಸಾರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ನ್ನು ದಿನಾಂಕ 10–5–1993 ರಿಂದ ಜಾರಿಗೆ ಬರುವಂತೆ ಹೊರಡಿಸಲಾಯಿತು.

4. ಏತನ್ಮಧ್ಯೆ, ನೂತನವಾಗಿ ಸೃಜನೆಗೊಂಡಿದ್ದ ಜಿಲ್ಲಾ ಪರಿಷತ್ತುಗಳಿಗೆ ತಾಂತ್ರಿಕ ಸಿಬ್ಬಂದಿಯ ಅಗತ್ಯತೆಯನ್ನು ಮನಗಂಡು ಸ್ಥಳೀಯ ಉದ್ಯೋಗ ವಿನಿಮಯ ಕಛೇರಿಗಳಿಂದ ತಾತ್ಕಾಲಿಕವಾಗಿ ಶೀಘ್ರಲಿಪಿಗಾರರು ಹಾಗೂ ಬೆರಳಚ್ಚುಗಾರರನ್ನು ನೇಮಕ ಮಾಡಿಕೊಳ್ಳಲಾಗಿತ್ತು. ಈ ನೌಕರರುಗಳ ಸೇವೆಯನ್ನು ಕಾಲಕಾಲಕ್ಕೆ ಮುಂದುವರೆಸಿ ಅಂತಿಮವಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ದಿನಾಂಕ 8–9–1997ರ ಆದೇಶದ ಮೂಲಕ ಈ ನೌಕರರುಗಳನ್ನು, ಆ ಹೊತ್ತಿಗಾಗಲೇ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಅಡಿಯಲ್ಲಿ, ಸ್ಥಾಪನೆಗೊಂಡಿದ್ದ ಜಿಲ್ಲಾ ಪಂಚಾಯಿತಿಗಳಲ್ಲಿ ವಿಲೀನಗೊಳಿಸಿ ಸೇವಾ ಸಕ್ರಮಾತಿ ನೀಡಲಾಗಿತ್ತು. ಈ ನೌಕರರುಗಳನ್ನು ಎರಡನೇ ಪ್ರವರ್ಗವೆಂದು ಸರ್ಕಾರವು ಗುರುತಿಸಿದೆ.

5. ಜೊತೆಗೆ ಹಿಂದಿನ ಜಿಲ್ಲಾ ಪರಿಷತ್ತುಗಳಲ್ಲಿ ಹಾಗೂ ದಿನಾಂಕ 10–5–1993 ರಿಂದ ಸ್ಥಾಪನೆಗೊಂಡ ಜಿಲ್ಲಾ ಪಂಚಾಯಿತಿಗಳಲ್ಲಿ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಸೇವಾ ಸಕ್ರಮಾತಿ ಪಡೆದ ನೌಕರರೂ ಸಹ ಜಿಲ್ಲಾ ಪಂಚಾಯಿತಿ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದು ಅವರುಗಳನ್ನೂ ಕೂಡ ಜಿಲ್ಲಾ ಪಂಚಾಯಿತಿ ಸೇವೆಗೆ ಸೇರಿದವರೆಂದು ಪರಿಗಣಿಸಿದ್ದು, ಈ ನೌಕರರುಗಳನ್ನು ಮೂರನೇ ಪ್ರವರ್ಗವೆಂದು ಸರ್ಕಾರವು ಗುರುತಿಸಿದೆ.

6. ಮೇಲಿನ ಮೂರೂ ಪ್ರವರ್ಗಗಳಿಗೆ ಸೇರಿ ಸೇವಾ ಸಕ್ರಮಾತಿ ಪಡೆದು ನಂತರದಲ್ಲಿ ಸೇವೆಯಲ್ಲಿರುವಾಗಲೇ ಮೃತಪಟ್ಟ ನೌಕರರ ಅವಲಂಬಿತರು ಅನುಕಂಪದ ಆಧಾರದ ಮೇಲೆ ವಿವಿಧ ಜಿಲ್ಲಾ ಪಂಚಾಯಿತಿಗಳಲ್ಲಿ ನೇಮಕಗೊಂಡಿದ್ದು, ಇವರುಗಳೂ ಸಹ ಜಿಲ್ಲಾ ಪಂಚಾಯಿತಿ ಸೇವೆಯ ವ್ಯಾಪ್ತಿಯಲ್ಲಿ ಬರುವುದರಿಂದ, ಸದರಿ ವರ್ಗದ ನೌಕರರನ್ನು ನಾಲ್ಕನೇ ಪ್ರವರ್ಗವೆಂದು ಸರ್ಕಾರವು ಗುರುತಿಸಿದೆ.

7. ಹಿಂದೆ, ಅಂದರೆ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಅಸ್ತಿತ್ವದಲ್ಲಿದ್ದ ಸಂದರ್ಭದಲ್ಲಿ ಸದರಿ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದ ನೌಕರರು ನಿವೃತ್ತಿ ಹೊಂದಿದಾಗ ಅವರುಗಳಿಗೆ ನಿವೃತ್ತಿ ಉಪದಾನ ನೀಡುವ ಸಂಬಂಧ ಪ್ರತ್ಯೇಕ ನಿಯಮವು ಚಾಲ್ತಿಯಲ್ಲಿತ್ತು. ಆದರೆ ದಿನಾಂಕ 1–4–1987 ರಿಂದ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ರದ್ದುಗೊಂಡ ಪರಿಣಾಮ ಮೇಲಿನ ಕಂಡಿಕೆ 2ರಲ್ಲಿ ತಿಳಿಸಿದಂತೆ ಆ ಸಂದರ್ಭದಲ್ಲಿ ಸದರಿ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದ ನೌಕರರ ಸೇವೆಯನ್ನು ನೂತನವಾಗಿ ಸೃಜನೆಗೊಂಡ ಜಿಲ್ಲಾ ಪರಿಷತ್ತುಗಳಲ್ಲಿ ಮುಂದುವರೆಸಿ ನಂತರ ಸೇವಾ ಸಕ್ರಮಾತಿ ನೀಡಲಾಯಿತಾದರೂ ಅಂತಹ ನೌಕರರಿಗೆ ನಿವೃತ್ತಿ ನಂತರ ನಿವೃತ್ತಿ ಉಪದಾನ ನೀಡುವ ಬಗ್ಗೆ ಯಾವುದೇ ನಿಯಮ ಅಥವಾ ಆದೇಶ ಚಾಲ್ತಿಯಲ್ಲಿ ತಂದಿರದ ಅಂಶವನ್ನು ಸರ್ಕಾರವು ಗಮನಿಸಿದೆ. ಈ ನೌಕರರುಗಳನ್ನು ಸರ್ಕಾರವು ಒಂದನೇ ಪ್ರವರ್ಗದಲ್ಲಿ ಗುರುತಿಸಿದೆಯಾದರೂ ಇನ್ನುಳಿದ ಮೂರು ಪ್ರವರ್ಗಗಳ ನೌಕರರೂ ಸಹ ಇದೇ ಗುಂಪಿಗೆ ಸೇರಿರುವ ಅಂದರೆ ಜಿಲ್ಲಾ ಪಂಚಾಯತ್ ಸೇವೆಯಲ್ಲಿ ಸಕ್ರಮಗೊಂಡಿರುವ ಅಂಶದ ನೆಲೆಯಲ್ಲಿ ಅವರುಗಳೂ ಸೇರಿದಂತೆ ಎಲ್ಲಾ ಪ್ರವರ್ಗಗಳನ್ನು ಒಟ್ಟುಗೂಡಿಸಿ ನಿವೃತ್ತಿ ಉಪದಾನ ಸೌಲಭ್ಯವನ್ನು ವಿಸ್ತರಿಸುವ ಕುರಿತಂತೆ ಸರ್ಕಾರವು ಸಮಗ್ರವಾಗಿ ಪರಿಶೀಲಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 260 ಕೆಎಸ್ಎಸ್ 2007, ಬೆಂಗಳೂರು, ದಿನಾಂಕ: 5ನೇ ಜನವರಿ 2009.**

ಮೇಲೆ ವಿವರಿಸಿರುವ ಸಂದರ್ಭಗಳಲ್ಲಿ, ಪ್ರಸ್ತಾವನೆಯಲ್ಲಿ, ನಮೂದಿಸಿರುವ ನಾಲ್ಕು ಪ್ರವರ್ಗಗಳಿಗೆ ಸೇರಿದ ಜಿಲ್ಲಾ ಪಂಚಾಯತ್ ನೌಕರರುಗಳಿಗೆ ಸೇವೆಯಿಂದ ನಿವೃತ್ತಿ ಹೊಂದುವ ಸಮಯದಲ್ಲಿ ಅಥವಾ ಸೇವೆಯಲ್ಲಿರುವಾಗಲೇ ಮರಣ ಹೊಂದಿದಲ್ಲಿ ಅಂತಹ ನೌಕರರಿಗೆ ನ್ಯಾಯಬದ್ಧ ಅವಲಂಬಿತರಿಗೆ, ಜಿಲ್ಲಾ ಪರಿಷತ್/ಜಿಲ್ಲಾ ಪಂಚಾಯತ್ ಸೇವೆಯಲ್ಲಿ ಸೇವಾ ಸಕ್ರಮಾತಿ ಪಡೆದ ದಿನಾಂಕದಿಂದ ಅನ್ವಯವಾಗುವಂತೆ ಅವರುಗಳು ಸಲ್ಲಿಸಿದ ಸೇವಾ ಅವಧಿಗೆ ಅನುರೂಪವಾಗಿ ಪ್ರತಿ ಒಂದು ವರ್ಷದ ಸೇವೆಗೆ 15 ದಿನಗಳ ವೇತನದಂತೆ ಗರಿಷ್ಠ 15 ತಿಂಗಳುಗಳ ವೇತನ ಮೀರದಂತೆ ನಿವೃತ್ತಿ ಉಪದಾನವನ್ನು ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

ಈ ನಿವೃತ್ತಿ ಉಪದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮಂಜೂರು ಮಾಡತಕ್ಕದ್ದು ಹಾಗೂ ಆ ನಿಟ್ಟಿನಲ್ಲಿ ತಗಲುವ ಸಂಪೂರ್ಣ ವೆಚ್ಚವನ್ನು ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡುವ ಅನುದಾನದಿಂದಲೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ. ಎಫ್‌ಡಿ 768 ಇಎಕ್ಸ್‌ಪಿ 6/2008, ದಿನಾಂಕ 2–12–2008 ರಲ್ಲಿ ನೀಡಿರುವ ಸಹಮತಿಯ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.461

**ಎಸ್.ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು ಇಲಾಖೆ (ಚುನಾವಣೆ ವಿಭಾಗ) ದಲ್ಲಿನ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2004, ದಿನಾಂಕ 23–12–2004.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2006, ದಿನಾಂಕ 7–6–2006.
3. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 68 ಚುಸಿಆ 2003, ದಿನಾಂಕ 30–6–2008 ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಚುನಾವಣೆಗಳು) ಅವರಿಂದ.

ಪ್ರಸ್ತಾವನೆ :

ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸುಇ (ಚುನಾವಣಾ ವಿಭಾಗ) ಯಲ್ಲಿನ ಜೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 23–12–2004ರ ಸರ್ಕಾರಿ ಆದೇಶದಲ್ಲಿ ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ಉನ್ನತೀಕರಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ 7–6–2006ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ 23–5–2006 ರಿಂದ 2 ವರ್ಷಗಳ ಅವಧಿಗೆ ಮುಂದುವರಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ 30–6–2008ರ ಅನಧಿಕೃತ ಟಿಪ್ಪಣಿಯಲ್ಲಿ ಸಿಆಸುಇ (ಚುನಾವಣೆ)ಯಲ್ಲಿ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ದಿನಾಂಕ 31–3–2010ರ ವರೆಗೆ ಮುಂದುವರಿಸುವಂತೆ ಹಾಗೂ ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್. ರಾಜು ಅವರು ದಿನಾಂಕ 31–3–2010ಕ್ಕೆ ವಯೋ ನಿವೃತ್ತಿ ಹೊಂದುತ್ತಿರುವುದರಿಂದ ಆ ದಿನಾಂಕದವರೆಗೆ ಮುಂದುವರಿಸುವಂತೆ ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 607 ಸಅಸೇ 2008, ಬೆಂಗಳೂರು, ದಿನಾಂಕ: 23ನೇ ಜನವರಿ 2009.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು ಇಲಾಖೆ ಚುನಾವಣೆಯಲ್ಲಿರುವ ಉನ್ನತೀಕರಿಸಿರುವ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ದಿನಾಂಕ 23–5–2008 ರಿಂದ 23–5–2010 ರವರೆಗೆ ಅಥವಾ ಈ ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್. ರಾಜು ಅವರು ವಯೋ ನಿವೃತ್ತಿ ಹೊಂದುವ ದಿನಾಂಕ 31–3–2010 ರವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1523 ವೆಚ್ಚ–5/2008, ದಿನಾಂಕ 25–8–2008 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.433

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಒಳಾಡಳಿತ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಹೆಚ್‌ಡಿ 109 ಪಿಆರ್‌ಇ 2008, ಬೆಂಗಳೂರು, ದಿನಾಂಕ: 30ನೇ ಜನವರಿ 2009.**

ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 109 ಪಿಆರ್‌ಇ 2008, ದಿನಾಂಕ 23–1–2009ರ ಪ್ರಸ್ತಾವನೆಯ ಭಾಗದಲ್ಲಿ 1ನೇ ಕಂಡಿಕೆಯ 4ನೇ ಸಾಲಿನಲ್ಲಿ ಮತ್ತು 3ನೇ ಕಂಡಿಕೆಯ 7ನೇ ಸಾಲಿನಲ್ಲಿ ಹಾಗೂ ಆದೇಶ ಭಾಗದ ಮೊದಲನೇ ಕಂಡಿಕೆಯ 3ನೇ ಸಾಲಿನಲ್ಲಿ ನಮೂದಿಸಲಾಗಿರುವ ವೇತನ ಶ್ರೇಣಿ ರೂ. 22400–525–24000ರಲ್ಲಿ "24000" ಎಂಬುದರ ಬದಲಿಗೆ "24500" ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.450

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಸೆರೆಮನೆ ಮತ್ತು ಸಿನಿಮಾ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2008–09ನೇ ಸಾಲಿನ ಮೊದಲನೇ ಕಂತಿನ ಬಾಕಿ ಅನುದಾನವನ್ನು ಬೆಳಗಾಂ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಸಮ ಸಂಖ್ಯೆಯ ಆದೇಶ ದಿನಾಂಕ 11–8–2008.
2. ಸರ್ಕಾರದ (ಆರ್ಥಿಕ ಇಲಾಖೆಯ) ಆದೇಶ ಸಂ. ಎಫ್‌ಡಿ 502 ಬಿಆರ್‌ಎಸ್ 2008, ದಿನಾಂಕ 29–12–2008.

ಪ್ರಸ್ತಾವನೆ :

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2008–09ನೇ ಸಾಲಿನಲ್ಲಿ ಕೇಂದ್ರ ಯೋಜನಾ ಆಯೋಗದ ವತಿಯಿಂದ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಬೆಳಗಾಂ ಜಿಲ್ಲಾ ಪಂಚಾಯತಿಗೆ

ಬಿಡುಗಡೆ ಮಾಡಬೇಕಾಗಿದ್ದ ಮೊದಲನೇ ಕಂತಿನ ವಿಶೇಷ ಕೇಂದ್ರ ಅನುದಾನ ರೂ. 319.781 ಲಕ್ಷ ಪೈಕಿ ಪ್ರಸಕ್ತ ಸಾಲಿನ ರಾಜ್ಯ ಆಯವ್ಯಯ ಹಂಚಿಕೆಯಲ್ಲಿನ ಅನುದಾನ ಕೊರತೆಯಿಂದ ಭಾಗಶಃ ಅನುದಾನ ರೂ. 155.821 ಲಕ್ಷಗಳನ್ನು ಮಾತ್ರ ಮೇಲೆ ಓದಲಾದ ಆದೇಶ (1)ರಂತೆ ಬಿಡುಗಡೆ ಮಾಡಲಾಗಿತ್ತು. ಹಾಲಿ ಆರ್ಥಿಕ ಇಲಾಖೆಯು ಮೇಲೆ ಓದಲಾದ ಆದೇಶ (2)ರಂತೆ ಈ ಕಾರ್ಯಕ್ರಮಕ್ಕೆ ಪ್ರಸಕ್ತ ಸಾಲಿಗೆ ಒಟ್ಟಾರೆ ರೂ. 839.00 ಲಕ್ಷ (ಬೆಳಗಾಂ ಜಿಲ್ಲಾ ಪಂಚಾಯತಿಗೆ ರೂ. 270.55 ಲಕ್ಷ ಸೇರಿ) ಹೆಚ್ಚುವರಿ ಅನುದಾನವನ್ನು ಪೂರಕ ಅಂದಾಜಿನ ಮುಖಾಂತರ ಒದಗಿಸಿರುತ್ತದೆ. ಈ ಪೈಕಿ ಬೆಳಗಾಂ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಬೇಕಾಗಿರುವ ಪ್ರಸಕ್ತ ಸಾಲಿನ ಮೊದಲನೇ ಕಂತಿನ ವಿಶೇಷ ಕೇಂದ್ರ ಅನುದಾನದ ಬಾಕಿ ರೂ. 163.960 ಲಕ್ಷಗಳನ್ನು (ರೂ. 319.781–155.821) ಹಾಲಿ ಆ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಡಬ್ಲ್ಯೂಜಿಪಿ 2008, ಬೆಂಗಳೂರು, ದಿನಾಂಕ: 19ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2008–09ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ವಿಶೇಷ ಕೇಂದ್ರ ಅನುದಾನ ರೂ. 1973.70 ಲಕ್ಷ ಪೈಕಿ ಬೆಳಗಾಂ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಬೇಕಾಗಿದ್ದ ಬಾಕಿ ಅನುದಾನ ರೂ. 163.96 ಲಕ್ಷ (ಒಂದು ಕೋಟಿ ಅರವತ್ತ ಮೂರು ಲಕ್ಷ ತೊಂಭತ್ತಾರು ಸಾವಿರ ರೂಪಾಯಿ)ಗಳನ್ನು ಮಾತ್ರ ಆ ಜಿಲ್ಲಾ ಪಂಚಾಯತಿಗೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. ಸರ್ಕಾರದ ಆದೇಶ ಸಂ. ಗ್ರಾಅಪ 6 ಡಬ್ಲ್ಯೂಜಿಪಿ 2008, ದಿನಾಂಕ 11–8–2008ರಲ್ಲಿನ ನಿಬಂಧನೆಗಳನ್ನು ಪರಿಪಾಲಿಸುವುದು.
2. ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಯು ಸಹಾಯಾನುದಾನದ ಬಿಲ್ಲಿನ ಮೇಲೆ ನಿಯಮಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆಯುವುದು.
   2551–ಗುಡ್ಡಗಾಡು ಪ್ರದೇಶಗಳು–01–ಪಶ್ಚಿಮ ಘಟ್ಟಗಳು–198–ಗ್ರಾಮ ಪಂಚಾಯತಿಗಳಿಗೆ ಸಹಾಯ–6–ಗ್ರಾಮ ಪಂಚಾಯತ್–ಕೇಂದ್ರ ಪುರಸ್ಕೃತ ಯೋಜನೆ–02–ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ (ಯೋಜನೆ).

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ. ಎಫ್‌ಡಿ 502 ಬಿಆರ್‌ಎಸ್ 2008, ದಿನಾಂಕ 29–12–2008ರ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂ. ಗ್ರಾಅಪ 20 ಪಿಬಿಎಸ್ 2009, ದಿನಾಂಕ 19–1–2009ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಪಿ.ಸಿ. ಜಾಫರ್**

ಪಿ.ಆರ್.460

ನಿರ್ದೇಶಕರು

ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## PERSONNEL AND ADMINISTRATIVE REFORMS SECRETARIAT

**Sub :** Redesignation & up-gradation of the Cadre post of Director General of Police in Karnataka State in terms of IPS (Pay) Amendment Rules, 2008.

**Read :**
1. Notification No. 14021/4/2008-AIS-II, dated 27-9-2008.
2. Letter dated: 27-9-2008 from the Government of India, Ministry of Personnel, Public Grievances & Pensions, Department of Personnel and Training, New Delhi addressed to the Chief Secretaries of all the State Governments.

**Government Order No. DPAR 90 SPS 2008, Bangalore, Dated 23rd January 2009**

In pursuance of the letter dated 27-9-2008 of the Government of India read at Sl.No. 2 above and under rule 3(1)(D)(iii) of IPS (Pay) Amendment Rules 2008, vide Government of India Notification read at Sl.No. 1 above, the existing IPS cadre post of Director General & Inspector General of Police, Karnataka, Bangalore in the "Above Super Time scale (HAG+) of Rs. 75,500/- (Annual increment at 3%)-

Rs. 80,000/- Grade Pay Nil" is upgraded and designated as Director General & Inspector General of Police, (Head of Police Force), Karnataka, Bangalore in the "Above Super Time Apex scale of Rs. 80,000/- (fixed), Grade Pay Nil", w.e.f. 27-9-2008, i.e. the date of Government of India Notification of IPS (Pay) Amendment Rules, 2008.

The incumbant who occupies the said post will be entitled to draw the "Apex scale of Rs. 80,000 (fixed) – Grade Pay Nil", as long as he/she occupies the said post.

The post of DG & IGP (Head of Police Force) Karnataka, Bangalore in the Apex Scale shall be filled by Selection from amongst the IPS officers holding the post of Director General of Police in the State Cadre in the "Above Super Time Scale (HAG+) – Rs. 75,500 (annual increment at 3%) – 80,000/- Grade Pay Nil", as per Note-2 below rule 3(1)(D) of IPS (Pay) Amendment Rules 2008.

By order and in the name of the Governor of Karnataka,

PR. 435

**ASHOK P. ATRE**

Under Secretary to Government, DPAR (Services-4).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಶಿವಮೊಗ್ಗದಲ್ಲಿ ತೆರೆಯುವ ಬಗ್ಗೆ.

**ಆದೇಶ ಸಂಖ್ಯೆ: ಸಿಆಸುಇ 67 ಸೇಲೋಸೇ 2008, ಬೆಂಗಳೂರು, ದಿನಾಂಕ: 20ನೇ ಜನವರಿ 2009.**

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 64 ಸೇಲೋಸೇ 93, ದಿನಾಂಕ 21–7–1994.

2. ಅಧ್ಯಕ್ಷರು ಕರ್ನಾಟಕ ಲೋಕ ಸೇವಾ ಆಯೋಗ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆಡಳಿತ 976/08–09/ಪಿಎಸ್‌ಸಿ, ದಿನಾಂಕ 22–8–2008.

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸಾರ್ವಜನಿಕರ ಹಾಗೂ ಅಭ್ಯರ್ಥಿಗಳ ಕೋರಿಕೆಯ ಮೇರೆಗೆ ಗುಲ್ಬರ್ಗಾ, ಬೆಳಗಾಂ ಮತ್ತು ಮೈಸೂರು ನಗರಗಳಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಸ್ಥಾಪಿಸಲು ಅನುಮತಿ ನೀಡಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಶಿವಮೊಗ್ಗದಲ್ಲಿ ತೆರೆಯುವುದರಿಂದ, ಶಿವಮೊಗ್ಗ, ಚಿಕ್ಕಮಗಳೂರು, ದಾವಣಗೆರೆ, ಚಿತ್ರದುರ್ಗ, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳ ಅಭ್ಯರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಪ್ರಯೋಜನ ಉಂಟಾಗಲಿದೆ ಎಂದು, ಜೊತೆಗೆ ಮೇಲೆ ಸೂಚಿಸಿದ ಜಿಲ್ಲೆಗಳ ಅಭ್ಯರ್ಥಿಗಳು ಮೈಸೂರು ಪ್ರಾಂತೀಯ ಕಛೇರಿಯನ್ನು ಸಂಪರ್ಕಿಸುವುದನ್ನು ತಪ್ಪಿಸಬಹುದೆಂದು, ಲೋಕ ಸೇವಾ ಆಯೋಗವು ತಿಳಿಸುತ್ತಾ, ಶಿವಮೊಗ್ಗದಲ್ಲಿ ಆಯೋಗದ ಪ್ರಾಂತೀಯ ಕಛೇರಿಯನ್ನು ತೆರೆಯಲು ಹಾಗೂ ಅದರ ಕಾರ್ಯನಿರ್ವಹಣೆಗೆ ಸಹಾಯಕ ಕಾರ್ಯದರ್ಶಿ–1, ಶಾಖಾಧಿಕಾರಿ–1, ಸಹಾಯಕರು–1, ಕಿರಿಯ ಸಹಾಯಕರು–2, ಬೆರಳಚ್ಚುಗಾರರು–1 ಮತ್ತು ಗ್ರೂಪ್ 'ಡಿ'–2, ಒಟ್ಟು 8 ಹುದ್ದೆಗಳನ್ನು ಶೀಘ್ರವಾಗಿ ಮಂಜೂರು ಮಾಡುವಂತೆ ಆಯೋಗವು ಉಲ್ಲೇಖ (2)ರಲ್ಲಿನ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಕರ್ನಾಟಕ ಲೋಕ ಸೇವಾ ಆಯೋಗದ ಪ್ರಸ್ತಾವನೆಯಂತೆ ಶಿವಮೊಗ್ಗದಲ್ಲಿ ಅದರ ಪ್ರಾಂತೀಯ ಕಛೇರಿಯನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ ಹಾಗೂ ಈ ಕಛೇರಿಗೆ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ:

| | |
|---|---|
| **ಗ್ರೂಪ್ 'ಎ' ಕಿರಿಯ ಶ್ರೇಣಿ** | |
| ಸಹಾಯಕ ಕಾರ್ಯದರ್ಶಿ | –1 |
| **ಗ್ರೂಪ್ 'ಬಿ'** | |
| ಶಾಖಾಧಿಕಾರಿ | –1 |
| **ಗ್ರೂಪ್ 'ಸಿ'** | |
| ಸಹಾಯಕರು | –1 |
| ಕಿರಿಯ ಸಹಾಯಕರು | –2 |
| ಬೆರಳಚ್ಚುಗಾರರು | –1 |
| **ಗ್ರೂಪ್ 'ಡಿ'** | –2 |
| | –8 |

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ 2113 ವೆಚ್ಚ-5/2008, ದಿನಾಂಕ 13-11-2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.432

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-1)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

## ಸೇರ್ಪಡೆ ಆದೇಶ

**ಸಂಖ್ಯೆ: ಐಟಿಡಿ 1 ಎಂಡಿಎ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2009.**

**ವಿಷಯ :** ಬೆಳಗಾವಿ ನಗರದ ಹಿಂಡಲಗಾ ಗ್ರಾಮದ ರಿ.ಸ.ನಂ. 189/ಎ/1ರಲ್ಲಿ 5 ಎಕರೆ 17 ಗುಂಟೆ 3.26 ಅಣಿ ಜಮೀನನ್ನು ಕಿಯೋನಿಕ್ಸ್ ಮತ್ತು ಎಸ್.ಟಿ.ಪಿ.ಐ. ಸಂಸ್ಥೆಗಳಿಗೆ ನೀಡುವ ಬಗ್ಗೆ.

ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 1 ಎಂಡಿಎ 2009, ದಿನಾಂಕ 20-1-2009ರಲ್ಲಿನ ಪ್ರಸ್ತಾವನೆಯ ವಿಭಾಗದ ಕಂಡಿಕೆ 1ರಲ್ಲಿನ 8ನೇ ಸಾಲಿನ "ಕಿಯೋನಿಕ್ಸ್ ಸಂಸ್ಥೆಗೆ" ಎಂಬ ಪದಗಳ ನಂತರ ಹಾಗೂ ಕ್ರಿಯಾತ್ಮಕ ವಿಭಾಗದ (Operative Portion) 4ನೇ ಸಾಲಿನ "ಕಿಯೋನಿಕ್ಸ್ ಸಂಸ್ಥೆಗೆ" ಎಂಬ ಪದಗಳ ನಂತರ ಈ ಕೆಳಕಂಡ ಪದಗಳನ್ನು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

**"ದೀರ್ಘಾವಧಿ ಗುತ್ತಿಗೆ"**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.425

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ: ಅಪಜೀ 252 ಅಪಸೇ 2003, ಬೆಂಗಳೂರು, ದಿನಾಂಕ: 23ನೇ ಜನವರಿ 2009.**

ಸರ್ಕಾರದ ಅಧಿಸೂಚನೆ ಸಂಖ್ಯೆ: 252 ಅಪಸೇ 2003, ದಿನಾಂಕ 28-11-2007ರ ಕ್ರಮ ಸಂಖ್ಯೆ 2ರಲ್ಲಿ ಶ್ರೀ ಕೆ. ಪ್ರಬೋಧ ಇವರ ಹೆಸರಿನ ಮುಂದೆ ಶ್ರೀ ಎಂ.ಟಿ. ಮಾಚಾ, ದಿನಾಂಕ 2-5-2002 ಎಂಬುದರ ಬದಲಾಗಿ ಶ್ರೀ ಸಿ. ರಾಮಕೃಷ್ಣಯ್ಯ, ದಿನಾಂಕ 14-6-2002 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.426

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ :** 12ನೇ ಹಣಕಾಸು ಆಯೋಗದ ಸಹಯೋಗದಲ್ಲಿ ಬೆಂಗಳೂರು ಅಕ್ಕಪಕ್ಕದ 5 ಪಟ್ಟಣಗಳನ್ನು ನಗರಮಾಪನ ವ್ಯಾಪ್ತಿಗೆ ತರುವ ಕುರಿತು ಭೂಕಂದಾಯ ಅಧಿನಿಯಮ 1964ರ ಕಲಂ 106ರನ್ವಯ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಭೂಮಾಪನ ಇಲಾಖೆರವರ ಪತ್ರ ಸಂಖ್ಯೆ: ತಾಂ. ನಮಾ(ನಯೋ) 22/2006-07, ದಿನಾಂಕ 13-11-2008.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 13-11-2008ರ ಪತ್ರದಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆರವರು, 12ನೇ ಹಣಕಾಸು ಆಯೋಗದ ಯೋಜನೆ ಅಡಿಯಲ್ಲಿ ಕೆಳಕಂಡ ಬೆಂಗಳೂರು ಅಕ್ಕಪಕ್ಕದ 5 ಪಟ್ಟಣಗಳಾದ, ಅಂದರೆ

1) ಆನೇಕಲ್
2) ಹೊಸಕೋಟೆ
3) ಕನಕಪುರ
4) ಮಾಗಡಿ
5) ನೆಲಮಂಗಲ

ಇವುಗಳ ನಗರಮಾಪನ ಕಾರ್ಯ ಕೈಗೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 106ರನ್ವಯ ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರು, ಭೂಮಾಪನ ಇಲಾಖೆರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 280 ಭೂದಾಸ 2008, ಬೆಂಗಳೂರು, ದಿನಾಂಕ: 21ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 106ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಬೆಂಗಳೂರು ಅಕ್ಕಪಕ್ಕದ 5 ಪಟ್ಟಣಗಳ ನಗರಮಾಪನ ಕಾರ್ಯ ಕೈಗೊಳ್ಳಲು ಆದೇಶಿಸಿದೆ.

1) ಆನೇಕಲ್
2) ಹೊಸಕೋಟೆ
3) ಕನಕಪುರ
4) ಮಾಗಡಿ
5) ನೆಲಮಂಗಲ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.413

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಸಿಆಸುಇ 93 ಸೇನಿಸಿ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009.**

ದಿನಾಂಕ 25ನೇ ಸೆಪ್ಟೆಂಬರ್ 2008ರ ಅಧಿಸೂಚನೆ ಸಂಖ್ಯೆ. ಸಿಆಸುಇ 48 ಸೇನಿಸಿ 2007 ರಲ್ಲಿರುವ "2 ನಿಯಮ 23ರ ತಿದ್ದುಪಡಿ" ಎಂಬ ಶೀರ್ಷಿಕೆಯಡಿಯಲ್ಲಿರುವ "ಉಪ ನಿಯಮ (2)" ಎಂಬ ಪದಕ್ಕೆ ಬದಲಾಗಿ "ಉಪ ನಿಯಮ (3)" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.408

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2007–08ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಬಿಜಾಪುರ ಜಿಲ್ಲಾ ಪಂಚಾಯತಿಗೆ ಬಿಡುಗಡೆಯಾಗಿದ್ದ ರಾಜ್ಯದ ಪಾಲಿನ ಹಣದ ನವೀಕರಣದ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರ ಪತ್ರ ಸಂಖ್ಯೆ: ಆರ್ 17014/10/2007 ಡಿಆರ್‌ಡಿಎ (ಎಸ್ ನಂ. 107) ದಿನಾಂಕ 19–12–2007.
2. ರಾಜ್ಯ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2007, ಬೆಂಗಳೂರು ದಿನಾಂಕ 21–1–2008.
3. ಮುಕಾನಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರ ಪತ್ರ ಸಂಖ್ಯೆ. ಜಿಪಂಹ/ಡಿಆರ್‌ಡಿಎ/ 2008–09/ 53, ದಿನಾಂಕ 19–4–2008.
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ. ಆರ್ 17014/10/2008–09, ಡಿಆರ್‌ಡಿಎ (ಎಸ್‌ಎಲ್ ನಂ. 82), ದಿನಾಂಕ 3–11–2008.

**ಪ್ರಸ್ತಾವನೆ :**

2007–08ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರವು ಓದಲಾದ (1)ರಲ್ಲಿ ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ರೂ. 1,33,17,000 ಬಿಡುಗಡೆ ಮಾಡಿತ್ತು. ಇದರನ್ವಯ ರಾಜ್ಯ ಸರ್ಕಾರ ಓದಲಾದ (2)ರಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಲ್ಲಿ ಲಭ್ಯವಿದ್ದ ಅನುದಾನಕ್ಕನುಗುಣವಾಗಿ ಒಟ್ಟು ರೂ. 35,77,000 ಬಿಡುಗಡೆ ಮಾಡಿತ್ತು.

ಈ ಪೈಕಿ ಬಿಜಾಪುರ ಜಿಲ್ಲಾ ಪಂಚಾಯತಿಗೆ ರಾಜ್ಯದ ಪಾಲಿನ ಅನುದಾನ ರೂ. 3,12,000 ಬಿಡುಗಡೆ ಮಾಡಿತ್ತು. ಓದಲಾಗಿದೆ (3)ರಲ್ಲಿ ಬಿಜಾಪುರ ಜಿಲ್ಲಾ ಪಂಚಾಯತಿಯು ದಿನಾಂಕ 22–1–2008ರ ಆದೇಶದಲ್ಲಿ ಬಿಡುಗಡೆಯಾಗಿದ್ದ ರೂ. 3,12,000 ಗಳನ್ನು ಆಡಳಿತಾತ್ಮಕ ತೊಂದರೆಯಿಂದಾಗಿ ಖಜಾನೆಯಿಂದ ಹಣ ಸೆಳೆಯಲು ಸಾಧ್ಯವಾಗಿಲ್ಲವೆಂದು ತಿಳಿಸಿ 2008–09ನೇ ಸಾಲಿಗೆ ಅನುದಾನವನ್ನು ನವೀಕರಿಸಿ ಕೊಡುವಂತೆ ಕೋರಿದೆ. ಈ ಕಾರಣವಾಗಿ, ಕೇಂದ್ರ ಸರ್ಕಾರವು ಓದಲಾಗಿದೆ (4)ರ ಆದೇಶದಲ್ಲಿ ಬಿಜಾಪುರ ಜಿಲ್ಲೆಗೆ 2008–09ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಕಡಿತಗೊಳಿಸಿ ಬಿಡುಗಡೆ ಮಾಡಿದೆ. ಕೇಂದ್ರ ಸರ್ಕಾರದಿಂದ ಜಿಲ್ಲೆಗೆ ಕಡಿತಗೊಳಿಸಿದ ಅನುದಾನವನ್ನು ಪುನಃ ಪಡೆಯುವ ಸಲುವಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನದಿಂದ ರೂ. 3,12,000ಗಳನ್ನು ಬಿಜಾಪುರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ ಡಿಆರ್‌ಡಿಎ 2007, ಬೆಂಗಳೂರು, ದಿನಾಂಕ: 24ನೇ ಜನವರಿ 2009.**

ರಾಜ್ಯ ಸರ್ಕಾರವು ಬಿಜಾಪುರ ಜಿಲ್ಲಾ ಪಂಚಾಯತಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ 2007–08ನೇ ಸಾಲಿನಲ್ಲಿ ಬಿಡುಗಡೆಗೊಳಿಸಿದ್ದ ರೂ. 3,12,000ಗಳನ್ನು (ರೂ. ಮೂರು ಲಕ್ಷದ ಹನ್ನೆರಡು ಸಾವಿರ ಮಾತ್ರ) ನವೀಕರಿಸಿ 2008–09ನೇ ಸಾಲಿನ ಆಯವ್ಯಯದಲ್ಲಿ ಈ ಕೆಳಕಂಡಂತೆ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ರಾಜ್ಯ ಸರ್ಕಾರವು 2007–08ನೇ ಸಾಲಿನ ಅನುದಾನವನ್ನು 2008–09ನೇ ಸಾಲಿನ ಆಯವ್ಯಯದಿಂದ ನವೀಕರಿಸಿ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|
| 1 | ಬಿಜಾಪುರ | 414 | 2800zz9152 | 3,12,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ) ಪುರಸ್ಕೃತ ಯೋಜನೆ) 2008–2009 (2515–00–196–6–06)"ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003, ದಿನಾಂಕ 8–9–2004 ಮತ್ತು 14–7–2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

ಬಿಜಾಪುರ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಬಿಜಾಪುರ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಬಿಜಾಪುರ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಸಹಮತಿ ಸಂಖ್ಯೆ: ಗ್ರಾಅಪ 05 ಪಿಬಿಎಸ್ 2009, ದಿನಾಂಕ 7–1–2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.405

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು, (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** 2007–08ನೇ ಸಾಲಿನ ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಆರ್ಥಿಕ ತಃಖ್ತೆಗಳನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 63(10)ರ ಅಡಿ ಮರುಪರಿಶೋಧನೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಲೆ.ಪ.ವಿ./5508/2008–09, ದಿನಾಂಕ 11–12–2008 & ಲೆ.ಪ.ವಿ./5420/2008–09, ದಿನಾಂಕ 6–12–2008.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/47/ಸಿಎಬಿ–1/2008–09, ದಿನಾಂಕ 11–12–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರಗಳಲ್ಲಿ 2007–08ನೇ ಸಾಲಿಗೆ ಆದಾಯ ತೆರಿಗೆ ಅಧಿನಿಯಮ 1961ರ ಪ್ರಕರಣ 36(1)(viia)ರ ಪ್ರಕಾರ ಸದರಿ ಸಾಲಿನಲ್ಲಿ ಗ್ರಾಮಾಂತರ ಶಾಖೆಗಳ ಮುಖಾಂತರ ನೀಡಿರುವ ಸಾಲ ರೂ. 1,737.60 ಲಕ್ಷಗಳ ಶೇಕಡಾ 10ರಷ್ಟು ಹಾಗೂ ಲಾಭಾಂಶದ ಶೇಕಡಾ 7.5ರಷ್ಟು ಮೊತ್ತಕ್ಕೆ ಅಂದರೆ ಒಟ್ಟು ಸುಮಾರು ರೂ. 200.00 ಲಕ್ಷಗಳಷ್ಟು ಆದಾಯ ತೆರಿಗೆಯಿಂದ ವಿನಾಯಿತಿ ಪಡೆಯಲು ಅರ್ಹವಾಗಿದ್ದು ಹಾಲಿ ಬಿಡುಗಡೆ ಆಗಿರುವ 2007–08ನೇ ಸಾಲಿನ ಆಸ್ತಿ–ಹೊಣೆ ಪಟ್ಟಿಯಲ್ಲಿ ಇದು ಪ್ರತಿಬಿಂಬಿತವಾಗದೇ ಇರುವುದರಿಂದ ಮತ್ತು ಠೇವಣಾತಿಗಳ ಮೇಲೆ ಬಡ್ಡಿಯ ಅವಕಾಶ ಸುಮಾರು ರೂ. 90.00 ಲಕ್ಷ ಹಾಗೂ ಶಾಖೆಗಳ ಹೊಂದಾಣಿಕೆ ಲೆಕ್ಕಗಳಲ್ಲಿ ಸುಮಾರು ರೂ. 97.67 ಲಕ್ಷಗಳ ಹೆಚ್ಚುವರಿಯಾಗಿ ಅವಕಾಶ ಕಲ್ಪಿಸಿದ್ದು ಹೆಚ್ಚುವರಿಯಾದ ಅವಕಾಶಗಳನ್ನು ಕಡಿಮೆ ಮಾಡಿ ಆದಾಯ ತರದ ಆಸ್ತಿ (NPA) ಅಡಿ ರೂ. 187.67 ಲಕ್ಷಗಳ ಹೆಚ್ಚಿಗೆ ಅವಕಾಶಗಳನ್ನು ಕಲ್ಪಿಸಿದಲ್ಲಿ ಬ್ಯಾಂಕಿಗೆ ಸುಮಾರು ರೂ. 70.00 ಲಕ್ಷಗಳ ಆದಾಯ ತೆರಿಗೆ ವಿನಾಯಿತಿ ಸಿಗುತ್ತದೆಂದು ತಿಳಿಸಿ ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು 2007–08ನೇ ಸಾಲಿನ ಆರ್ಥಿಕ ತಃಖ್ತೆಗಳನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 63(10)ರ ಪ್ರಕಾರ ಮರುಲೆಕ್ಕಪರಿಶೋಧನೆ ನಡೆಸಲು ಅನುಮತಿ ಕೊಡುವಂತೆ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಕೋರಿದ್ದಾರೆ. ಮೇಲೆ ಓದಲಾದ (2)ರ ಪತ್ರದಲ್ಲಿ ಬ್ಯಾಂಕಿನ ಪ್ರಸ್ತಾವವನ್ನು ಪರಿಗಣಿಸಬಹುದೆಂದು ಸಹಕಾರ ಸಂಘಗಳ ನಿಬಂಧಕರು ಶಿಫಾರಸು ಮಾಡಿದ್ದಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 232 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ 2007–08ನೇ ಸಾಲಿನ ಆರ್ಥಿಕ ಪರಿಸ್ಥಿತಿಯ ನೈಜ ಚಿತ್ರಣವನ್ನು ಪ್ರತಿಬಿಂಬಿಸುವ ಹಿತದೃಷ್ಟಿಯಿಂದ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 63(10)ರ ಅಡಿ ಸರ್ಕಾರಕ್ಕೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ 2007–08ನೇ ಸಾಲಿನ ಆರ್ಥಿಕ ತಃಖ್ತೆಗಳಲ್ಲಿ ಅವಕಾಶ (provisioning) ಕಲ್ಪಿಸುವ ಬಗ್ಗೆ ಮರುಪರಿಶೋಧನೆ ಮಾಡಲು ಅನುಮತಿ ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.286

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಭೂಮಶೆಟ್ಟಿ ಆರ್. ಪಾಟೀಲ್, ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ವಿರುದ್ಧ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರ ಷೋಕಾಸ್ ನೋಟೀಸ್ ಸಂಖ್ಯೆ: ಡಿಪಿಜಿ (2)/15/2003–04, ದಿನಾಂಕ 1–7–2003.

2. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರ ಆದೇಶ ಸಂಖ್ಯೆ: ಡಿಪಿಜಿ (2)/15/2003–04, ದಿನಾಂಕ 3–3–2005.

3. ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ಜಾಕೋ/59/2004–05, ದಿನಾಂಕ 5–4–2006.
4. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ (2)/15/2003–04, ದಿನಾಂಕ 4–5–2006.
5. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ (2)/15/2003–04, ದಿನಾಂಕ 20–10–2008.

**ಪ್ರಸ್ತಾವನೆ :**

ಡಾ: ಭೂಮಶೆಟ್ಟಿ ಆರ್. ಪಾಟೀಲ್, ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರು ದಿನಾಂಕ 26–9–2002 ರಿಂದ 28–9–2002ರ ವರೆಗೆ ರಜೆ ಮೇಲೆ ತೆರಳಿದ್ದು, ಈವರೆವಿಗೂ ಸರ್ಕಾರಿ ಸೇವೆಗೆ ಹಾಜರಾಗದೆ ಅನಧಿಕೃತ ಗೈರುಹಾಜರಾದ ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರು ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆರೋಪಿತ ವೈದ್ಯರಿಗೆ ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಸದರಿ ನೋಟೀಸಿಗೆ ಆಪಾದಿತ ವೈದ್ಯರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ, ಅವರ ವಿರುದ್ಧದ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಈ ಪ್ರಕರಣವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆಗೆ ವಹಿಸಲು ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರು ತೀರ್ಮಾನಿಸಿ ಅದರಂತೆ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಲೇ–ಕಾರ್ಯದರ್ಶಿ, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಮೇಲೆ (3)ರಲ್ಲಿ ಓದಲಾದ ವಿಚಾರಣಾಧಿಕಾರಿಗಳಾದ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ನಿಯಮಾನುಸಾರ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿದ್ದು, ಈ ವಿಚಾರಣಾ ವರದಿಯಲ್ಲಿ ಡಾ: ಭೂಮಶೆಟ್ಟಿ ಆರ್. ಪಾಟೀಲ್, ವೈದ್ಯಾಧಿಕಾರಿಗಳು, ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ವಿಚಾರಣೆಯಲ್ಲಿ ಸಂಪೂರ್ಣವಾಗಿ ಸಾಬೀತಾಗಿದೆ ಎಂದು ನಿರ್ಣಯ ನೀಡಿರುತ್ತಾರೆ.

ಸದರಿ ವಿಚಾರಣಾ ವರದಿಯನ್ನು ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಆಪಾದಿತ ವೈದ್ಯರಿಗೆ ಜಾರಿ ಮಾಡಿ ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಸಲ್ಲಿಸುವಂತೆ ಸೂಚಿಸಿರುತ್ತಾರೆ. ಡಾ: ಭೂಮಶೆಟ್ಟಿ ಆರ್. ಪಾಟೀಲ್, ವೈದ್ಯಾಧಿಕಾರಿಗಳು, ಸದರಿ ತಿಳುವಳಿಕೆ ಪತ್ರಕ್ಕೆ ಉತ್ತರ ನೀಡಿರುವುದಿಲ್ಲವೆಂದು ತಿಳಿಸಿ ಇಲಾಖಾ ವಿಚಾರಣೆಯಲ್ಲೂ ಕೂಡ ಇವರ ವಿರುದ್ಧದ ಅನಧಿಕೃತ ಗೈರುಹಾಜರಿ ಆರೋಪವು ಸಾಬೀತಾಗಿರುವುದರಿಂದ, ಇವರಿಗೆ ಸೇವೆಯಿಂದ ವಜಾಗೊಳಿಸುವ ಕಠಿಣ ದಂಡನೆ ವಿಧಿಸಲು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಆಯುಕ್ತರ ಪ್ರಸ್ತಾವನೆಯನ್ನು ಸಂಬಂಧಿಸಿರುವ ದಾಖಲಾತಿಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದೆ. ಡಾ: ಭೂಮಶೆಟ್ಟಿ ಆರ್. ಪಾಟೀಲ್, ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಅಧಿಕಾರಿಯಾಗಿದ್ದು, ಕಾರಣ ನೀಡದೆ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ವಿಚಾರಣೆಗೂ ಹಾಜರಾಗದೆ, ತಿಳುವಳಿಕೆ ಪತ್ರಕ್ಕೆ ಸ್ಪಂದಿಸದೆ ದಿನಾಂಕ 28–9–2002 ರಿಂದ ಈ ವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿ ಆಗಿರುವುದು ಇಲಾಖಾ ವಿಚಾರಣೆಯಿಂದ ರುಜುವಾತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ 8(viii) ರನ್ವಯ ಸದರಿ ವೈದ್ಯರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಕಠಿಣ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 424 ಎಂಎಸ್ಎ 2008, ಬೆಂಗಳೂರು, ದಿನಾಂಕ: 1ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ 8(viii) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಭೂಮಶೆಟ್ಟಿ ಆರ್. ಪಾಟೀಲ್, ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ 'ವಜಾ' ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.267

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2007–08ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಗೆ ಬಿಡುಗಡೆಯಾಗಿದ್ದ ರಾಜ್ಯದ ಪಾಲಿನ ಹಣದ ನವೀಕರಣದ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರ ಪತ್ರ ಸಂಖ್ಯೆ: ಆರ್ 17014/10/2007 ಡಿಆರ್‌ಡಿಎ (ಎಸ್ ನಂ. 185) ದಿನಾಂಕ 12–2–2008.
2. ರಾಜ್ಯ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2007, ಬೆಂಗಳೂರು ದಿನಾಂಕ 20–2–2008.
3. ಮುಕಾನಿ, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಇವರ ಪತ್ರ ಸಂಖ್ಯೆ: ಬೆಂಗ್ರಾಜಿಪಂ/ಲೆಕ್ಕ–1/ಡಿಆರ್‌ಡಿಎ/ಅನು ಬಿ/2008–09, ದಿನಾಂಕ 20–1–2009.

**ಪ್ರಸ್ತಾವನೆ :**

2007–08ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರವು ಓದಲಾದ (1)ರಲ್ಲಿ ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ರೂ. 84,28,000 ಬಿಡುಗಡೆ ಮಾಡಿತ್ತು. ಇದರನ್ವಯ ರಾಜ್ಯ ಸರ್ಕಾರ ಓದಲಾದ (2)ರಲ್ಲಿ ಒಟ್ಟು ಅನುದಾನ ರೂ. 28,10,000 ಬಿಡುಗಡೆ ಮಾಡಿತ್ತು. ಈ ಪೈಕಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಗೆ ರಾಜ್ಯದ ಪಾಲಿನ ಅನುದಾನ ರೂ. 6,95,000 ಬಿಡುಗಡೆ ಮಾಡಿತ್ತು. ಓದಲಾಗಿದೆ (3)ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಯು ದಿನಾಂಕ 20–2–2008ರ ಆದೇಶದಲ್ಲಿ ಬಿಡುಗಡೆಯಾಗಿದ್ದ ರೂ. 6,95,000ಗಳಲ್ಲಿ ರೂ. 26,775 ಗಳನ್ನು ಆಡಳಿತಾತ್ಮಕ ತೊಂದರೆಯಿಂದಾಗಿ ಖಜಾನೆಯಿಂದ ಹಣ ಸೆಳೆಯಲು ಸಾಧ್ಯವಾಗಿಲ್ಲವೆಂದು ತಿಳಿಸಿ ನವೀಕರಿಸಿ ಕೊಡುವಂತೆ ಕೋರಿದೆ. ಅಲ್ಲದೆ, ಕೇಂದ್ರ ಸರ್ಕಾರ 2007–08ನೇ ಸಾಲಿಗೆ ಒಟ್ಟಾರೆ ಆ ಜಿಲ್ಲೆಗೆ ಬಿಡುಗಡೆ ಮಾಡಿದ ರೂ. 46,90,000ಗಳಿಗೆ ಅನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ. 15,63,000 ಬಿಡುಗಡೆ ಮಾಡಬೇಕಾಗಿತ್ತು. ಆದರೆ, 2007–08ನೇ ಸಾಲಿಗೆ ಜಿಲ್ಲೆಗೆ ಆಯವ್ಯಯದಲ್ಲಿ ಲಭ್ಯತೆವಿದ್ದ ಅನುದಾನ ರೂ. 15,00,000 ಮಾತ್ರ ಬಿಡುಗಡೆ ಮಾಡಲಾಗಿತ್ತು. 2007–08ನೇ ಸಾಲಿನಲ್ಲಿ ರಾಜ್ಯದ ಪಾಲಿನ ಉಳಿಕೆ ಅನುದಾನ ರೂ. 63,000 ಹಾಗೂ ವ್ಯಪಗತ ಮೊತ್ತ ರೂ. 26,775 ಒಟ್ಟು ರೂ. 89,775 (ಅಂದರೆ ಪೂರ್ಣಾಂಕ ರೂ. 90,000) ಬಿಡುಗಡೆ ಮಾಡಬೇಕೆಂದು ಓದಲಾಗಿದೆ (3)ರಲ್ಲಿ ಜಿಲ್ಲಾ ಪಂಚಾಯತ್ ಕೋರಿದೆ. ಆದ ಕಾರಣ, 2008–09ನೇ ಸಾಲಿಗೆ ಜಿಲ್ಲೆಗೆ ಲಭ್ಯವಿರುವ ಅನುದಾನದಿಂದ ರೂ. 90,000ಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ ಡಿಆರ್‌ಡಿಎ 2007, ಬೆಂಗಳೂರು, ದಿನಾಂಕ: 24ನೇ ಜನವರಿ 2009.**

ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯ ಸರ್ಕಾರವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಗೆ ರೂ. 90,000 ಗಳನ್ನು (ರೂ. ತೊಂಬತ್ತು ಸಾವಿರ ಮಾತ್ರ) ಈ ಕೆಳಕಂಡಂತೆ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ರಾಜ್ಯ ಸರ್ಕಾರವು 2008–09ನೇ ಸಾಲಿನ ಆಯವ್ಯಯದಿಂದ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|
| 1 | ಬೆಂಗಳೂರು ಗ್ರಾಮಾಂತರ | 402 | 0300zz8001 | 90,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)"ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 8–9–2004 ಮತ್ತು 14–7–2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ), ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 31 ಪಿಬಿಎಸ್ 2009, ದಿನಾಂಕ 24–1–2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.404

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು, (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ತಿದ್ದುಪಡಿ ಕಲಂ 128 ಮತ್ತು 131 ರಂತೆ ತಯಾರಿಸಲಾಗುವ 11 ಇ ನಕ್ಷೆ ಕಳೆದುಹೋದಲ್ಲಿ ತಾಲ್ಲೂಕು ಕಚೇರಿಗಳಿಂದ ಹಣ ಪಾವತಿಸಿಕೊಂಡು ನಕಲುಗಳನ್ನು ಸಾರ್ವಜನಿಕರಿಗೆ ನೀಡುವ ಬಗ್ಗೆ.

**ಓದಲಾಗಿದೆ:** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಆಯುಕ್ತರು, ಏಕಕಡತ ಪದ್ಧತಿಯಲ್ಲಿ ಸಲ್ಲಿಸಲಾದ ಪ್ರಸ್ತಾವನೆ ಸಂಖ್ಯೆ ತಾಂ. ಪಭೂ.ಘಟಕ 52/08–09, ದಿನಾಂಕ 7–11–2008.

**ಪ್ರಸ್ತಾವನೆ :**

ಪರವಾನಗಿ ಭೂಮಾಪಕರ ಪದ್ಧತಿಯನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 18, 128 ಮತ್ತು 131ರ ಮತ್ತು ಕರ್ನಾಟಕ ಭೂ ಕಂದಾಯ ನಿಯಮಾವಳಿ 1966ರ ನಿಯಮ 46ರ ತಿದ್ದುಪಡಿಯಂತೆ ಜಾರಿಗೆ ತರಲಾಗಿದೆ. ಈ ಯೋಜನೆಯಿಂದ ಹಲವಾರು ಪ್ರಯೋಜನಗಳಾಗಿದ್ದು, ಸಾರ್ವಜನಿಕರಿಂದ ನಿಗದಿತ ಶುಲ್ಕವನ್ನು ಪಾವತಿಸಿಕೊಂಡು ಪರವಾನಗಿ ಭೂಮಾಪಕರ ಸೇವೆಯನ್ನು ಪಡೆದು ನೋಂದಣಿ ಪೂರ್ವ ಮತ್ತು ಮ್ಯುಟೇಷನ್ ಪೂರ್ವ ಹಾಜರುಪಡಿಸಬೇಕಾದಂತಹ 11 ಇ ನಕ್ಷೆಗಳನ್ನು ತಯಾರಿಸಿ ಸಾರ್ವಜನಿಕರಿಗೆ ನೀಡಲಾಗುತ್ತಿದೆ. ಅಳತೆ ಮಾಡಲು ನಿಗದಿತ ಶುಲ್ಕವನ್ನು ಹೊರತುಪಡಿಸಿ ನಕ್ಷೆ ನೀಡಲು ಪ್ರತ್ಯೇಕ ಶುಲ್ಕವನ್ನು ವಸೂಲಿ ಮಾಡಲಾಗುತ್ತಿಲ್ಲ. ಹಲವಾರು ಸಾರ್ವಜನಿಕರು ಹೀಗೆ ನೀಡಲಾಗಿರುವ 11 ಇ ನಕ್ಷೆಗಳನ್ನು ಕಳೆದುಕೊಂಡು ನಕಲನ್ನು ಕೋರಿ ಅರ್ಜಿಗಳನ್ನು ನೀಡುತ್ತಿದ್ದು, ಸಾರ್ವಜನಿಕರ ಹಿತದೃಷ್ಟಿಯಿಂದ ನಕಲುಗಳನ್ನು ನೀಡುವುದು ಸಮಂಜಸ ಕ್ರಮವಾಗಿರುತ್ತದೆ. ಅದಾಗ್ಯೂ ಅನಾವಶ್ಯಕವಾಗಿ ನಕಲು ಕೋರಿ ಬರುವಂತಹ ಅರ್ಜಿಗಳನ್ನು ನಿಯಂತ್ರಿಸಲು ಯಥೋಚಿತ ಶುಲ್ಕವನ್ನು ನಿಗಧಿಪಡಿಸುವುದು ಅನಿವಾರ್ಯವಾಗಿದ್ದು, ರೂ. 25.00ನ್ನು ಸಾರ್ವಜನಿಕರಿಂದ ಪಾವತಿಸಿಕೊಂಡು ಬಣ್ಣದ 11 ಇ ನಕ್ಷೆಯ ಛಾಯಾ ಪ್ರತಿಯನ್ನು ಸಾರ್ವಜನಿಕರಿಗೆ ವಿತರಿಸುವ ಕುರಿತು ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 265 ಭೂದಾಸ 2008, ದಿನಾಂಕ: 20ನೇ ಡಿಸೆಂಬರ್ 2008.**

ತಾಲ್ಲೂಕು ಕಚೇರಿಯಲ್ಲಿ ಪರವಾನಗಿ ಭೂಮಾಪಕರ ಸೇವೆಯನ್ನು ಬಳಸಿ ನೋಂದಣಿ ಪೂರ್ವ ಮತ್ತು ಮ್ಯುಟೇಷನ್ ಪೂರ್ವ ಹಾಜರುಪಡಿಸಬೇಕಾದಂತಹ 11 ಇ ನಕ್ಷೆಗಳನ್ನು ತಯಾರಿಸಿ ಸಾರ್ವಜನಿಕರಿಗೆ ನೀಡಲಾಗುತ್ತಿದೆ. ಅಳತೆ ಮಾಡಲು ನಿಗಧಿತ ಶುಲ್ಕವನ್ನು ಹೊರತುಪಡಿಸಿ ನಕ್ಷೆ ನೀಡಲು ಪ್ರತ್ಯೇಕ ಶುಲ್ಕವನ್ನು ವಸೂಲಿ ಮಾಡಲಾಗುತ್ತಿಲ್ಲ. ಸಾರ್ವಜನಿಕರು ಹೀಗೆ ನೀಡಲಾಗುವ 11 ಇ ನಕ್ಷೆಗಳನ್ನು ಕಳೆದುಕೊಂಡು ನಕಲುಗಳನ್ನು ಕೋರಿ ಅರ್ಜಿಗಳನ್ನು ನೀಡುತ್ತಿದ್ದಲ್ಲಿ, ಪ್ರತಿಯೊಂದು ಬಣ್ಣದ ಛಾಯಾ ಪ್ರತಿಗೆ ರೂ. 25/– ಶುಲ್ಕವನ್ನು ಪಾವತಿಸಿಕೊಂಡು ಸಾರ್ವಜನಿಕರಿಗೆ ವಿತರಿಸಲು ಸರ್ಕಾರ ಈ ಮೂಲಕ ಅನುಮೋದನೆ ನೀಡಿದೆ. ಸಾರ್ವಜನಿಕರಿಂದ ಹೀಗೆ ಸ್ವೀಕೃತವಾಗುವ ಹಣವನ್ನು ಸರ್ಕಾರದ ಬೊಕ್ಕಸಕ್ಕೆ ಅಂದರೆ ಲೆಕ್ಕಶೀರ್ಷಿಕೆ 0029–00–106–0–02 ಕಂದಾಯ ಭೂಮಾಪನ ದಾಖಲೆಗೆ ಶುಲ್ಕಕ್ಕೆ ಜಮಾ ಮಾಡಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.199

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)